# ಡಿ. ದೇವರಾಜ ಅರಸು: ಚಿಂತನೆಗಳ ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)


ಸಂಶೋಧನಾ ವಿದ್ಯಾರ್ಥಿ

ಹಣಮಂತ್ರಾಯ ದೊಡ್ಡಮನಿ

ಮಾರ್ಗದರ್ಶಕರು

ಡಾ. ಸಿ.ಆರ್. ಗೋವಿಂದರಾಜು

ಮುಖ್ಯಸ್ಥರು, ಚರಿತ್ರೆ ವಿಭಾಗ





ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೪-೦೫




# ಡಿ. ದೇವರಾಜ ಅರಸು: ಚಿಂತನೆಗಳ ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)


ಸಂಶೋಧನಾ ವಿದ್ಯಾರ್ಥಿ

**ಹಣಮಂತ್ರಾಯ ದೊಡ್ಡಮನಿ**

ಮಾರ್ಗದರ್ಶಕರು

**ಡಾ. ಸಿ.ಆರ್. ಗೋವಿಂದರಾಜು**

ಮುಖ್ಯಸ್ಥರು, ಚರಿತ್ರೆ ವಿಭಾಗ





ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೪-೦೫

# ಮಾರ್ಗದರ್ಶಕರ ಪ್ರಮಾಣಪತ್ರ

"ಡಿ. ದೇವರಾಜ ಅರಸು :ಚಿಂತನೆಗಳ ವಿಶ್ಲೇಷಣೆ" ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಶ್ರೀ ಹಣಮಂತ್ರಾಯ ದೊಡ್ಡಮನಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೨೩.೪.೦೭

(ಡಾ. ಸಿ.ಆರ್ ಗೋವಿಂದರಾಜು)
ಮಾರ್ಗದರ್ಶಕರು ಹಾಗೂ ಮುಖ್ಯಸ್ಥರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಪ್ರಮಾಣ ಪತ್ರ

**"ಡಿ.ದೇವರಾಜ ಅರಸು :ಚಿಂತನೆಗಳ ವಿಶ್ಲೇಷಣೆ"** ಎಂಬ ನಿಬಂಧವನ್ನು ಡಾ. ಸಿ.ಆರ್. ಗೋವಿಂದರಾಜು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 23/04/05

H.Doddamani

(ಹಣಮಂತ್ರಾಯ ದೊಡ್ಡಮನಿ)
ಸಂಶೋಧನಾ ವಿದ್ಯಾರ್ಥಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

## ಪರಿವಿಡಿ

## ಅಧ್ಯಾಯ ೧

# ಅಧ್ಯಯನದ ಹಿನ್ನೆಲೆ-ಪ್ರವೇಶ-ಸ್ವರೂಪ-ಮಹತ್ವ, ವಿಧಿ-ವಿಧಾನಗಳು ಹಾಗೂ ಮಿತಿಗಳು

ಪ್ರಸ್ತುತ ಅಧ್ಯಯನದ ಶೀರ್ಷಿಕೆಯೆ ಹೇಳುವಂತೆ ಈ ಅಧ್ಯಯನವು ನಾಡಿನ ಹಾಗೂ ರಾಷ್ಟ್ರದ ಕೆಲವೆ ಪ್ರತಿಭಾನ್ವಿತ ರಾಜಕಾರಣಿಗಳಲ್ಲಿ ಒಬ್ಬರಾದ 'ದೊಡ್ಡವನಹಳ್ಳಿ' ದೇವರಾಜ ಅರಸು ಅವರ ವಿಚಾರ-ಚಟುವಟಿಕೆಗಳಿಗೆ ಸಂಬಂಧಪಟ್ಟದ್ದು. ಕೇವಲ ಐವತ್ತು ಸಾವಿರಕ್ಕೂ ಕಡಿಮೆ ಇದ್ದ ಅಲ್ಪಸಂಖ್ಯಾತ 'ಅರಸು' ಜಾತಿ ಸಮುದಾಯವೊಂದರಿಂದ ಬಂದು ನಾಡಿನ ಮುಖ್ಯಮಂತ್ರಿ ಪದವಿಯ ಚುಕ್ಕಾಣಿ ಹಿಡಿಯುವುದು ಸುಲಭದ ಮಾತಾಗಿರಲಿಲ್ಲ. 'ಬಡವರ ಭಾಗ್ಯವಿಧಾತ'ರೆಂದೇ ಖ್ಯಾತಿ ಪಡೆದಿದ್ದ ಅರಸು ಅವರು 'ಗರೀಬಿ ಹಠಾವೋ' ಆಂದೋಲನದ ಹರಿಕಾರರೂ ಹೌದು. ಈ ದಿಸೆಯಲ್ಲಿ ಅವರ ಇಪ್ಪತ್ತು ಅಂಶಗಳ ಸೂತ್ರದ ಪ್ರಣಾಳಿಕೆಯು ಇಂದಿಗೂ ಅನುಕರಣೀಯವಾದದ್ದು. ಈ ನಾಡಿನ ಹಾಲಿ ಮುಖ್ಯ ಮಂತ್ರಿಗಳನ್ನೂ ಒಳಗೊಂಡಂತೆ ಹಿಂದೆ ಆಗಿ ಹೋದ ನಾಲ್ಕೈದು ಮುಖ್ಯಮಂತ್ರಿಗಳು ಸಹ ಇವರ ಸೈದ್ಧಾಂತಿಕ ಗರಡಿಯಲ್ಲಿಯೇ ಪಳಗಿದವರು. ಅಲ್ಲದೆ ಇಂದಿನ ಬಹುಪಾಲು ರಾಜಕಾರಣಿಗಳು, ಮಂತ್ರಿಗಳು ಅಂದು ಅವರು ಕಟ್ಟಿದ ಎಲ್ಲಾ ಜನಾಂಗಗಳ ಯುವಕ ಪಡೆಯ ಪ್ರತಿನಿಧಿಗಳೇ ಆಗಿದ್ದಾರೆ. ಪ್ರಬಲ ಜಾತಿ-ವರ್ಗಗಳ ರಾಜಕಾರಣಿಗಳ ಸ್ಪರ್ಧೆಯ ನಡುವೆ ಒಬ್ಬ ಹಿಂದುಳಿದ ವರ್ಗಗಳ ನೇತಾರ ನಾಗಿ, ನಾಡಿನ ಮುಖ್ಯಮಂತ್ರಿಯಾಗಿ ಎಂಟು ವರ್ಷಗಳ ಕಾಲ ರಾಜ್ಯವನ್ನಾಳಿದ ಹೆಗ್ಗಳಿಕೆ ದಾಖಲಾರ್ಹ ವಾದುದು. ತಮ್ಮ ಅವಧಿಯಲ್ಲಿ ಈ ರಾಜ್ಯದ ಪ್ರಗತಿಗಾಗಿ ಕಂಡ ಕನಸುಗಳು ಹಲವು. ಅವುಗಳ ಸಾಕಾರತೆಗೆ ವೈಚಾರಿಕವಾಗಿ ಹಾಗೂ ಕಾರ್ಯ-ಯೋಜನೆಗಳ ಮುಖೇನ ದುಡಿದ ಪರಿಶ್ರಮ ಅರಸು ಅವರದು. ಅವರು ನಾಡಿನ ಜನತೆಗಾಗಿ ಕೈಗೊಂಡ ಕಾರ್ಯಕ್ರಮಗಳು ಹಲವು. ಈ ದಿಸೆಯಲ್ಲಿ ಅರಸು ಅವರ ತಲೆಯ ಮೇಲೊಂದು ಸೂರು, ಉಡಲು ಬಟ್ಟೆ, ಎರಡು ಹೊತ್ತು ಊಟ, ಶಿಕ್ಷಣ, ಮಹಿಳಾ ಪ್ರಗತಿ, ಭೂಸುಧಾರಣೆಯಂಥವು ಇಂದಿಗೂ ಪ್ರಸ್ತುತ. ಅಲ್ಲದೆ ನಾಡಿನ ರಾಜಕಾರಣ, ಸಮಾಜ, ಆರ್ಥಿಕತೆ, ಭಾಷೆ, ಸಾಹಿತ್ಯ, ಸಂಸ್ಕೃತಿ ಮೊದಲಾದ ಕ್ಷೇತ್ರಗಳ ಬಗೆಗೆ ಇವರವು ಕ್ರಾಂತಿ ಕಾರಕ ಆಲೋಚನೆಗಳಾಗಿದ್ದವು. ಇಂಥ ಹಲವು ಬಗೆಯ ಆಲೋಚನೆಗಳನ್ನು ಕುರಿತು ಅಧ್ಯಯನಗಳು ನಡೆದಿವೆಯಾದರೂ ಬಹಳ ಕಡಿಮೆ. ಈ ದಿಸೆಯಲ್ಲಿ ಅರಸು ಅವರ ಚಿಂತನೆಗಳನ್ನು ಪ್ರಸ್ತುತ ಸಂದರ್ಭದಲ್ಲಿಟ್ಟು ಅಭ್ಯಾಸ ಮಾಡುವ, ಪರಿಶೀಲಿಸುವ, ವಿಶ್ಲೇಷಿಸುವ, ಅಧ್ಯಯನಕ್ಕೆ ಒಳಪಡಿಸುವ ಜರೂರು ಇದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವು ಒಂದು ಕಿರುಪ್ರಯತ್ನ.

## ಅಧ್ಯಯನದ ವ್ಯಾಪ್ತಿ ಮತ್ತು ಮಿತಿಗಳು

ಡಿ. ದೇವರಾಜ ಅರಸು ಅವರ ಚಿಂತನೆ ಹಾಗೂ ಚಟುವಟಿಕೆಗಳನ್ನು ಕೇಂದ್ರಬಿಂದುವನ್ನಾಗಿಸಿ ಕೊಂಡಿರುವ ಪ್ರಸ್ತುತ ಅಧ್ಯಯನವು ತನ್ನದೇ ಆದ ವ್ಯಾಪ್ತಿ ಹಾಗೂ ಮಿತಿಗಳಿಗೆ ಒಳಪಟ್ಟಿದೆ. ಸ್ವಾತಂತ್ರ್ಯೋತ್ತರ ಹಾಗೂ ಏಕೀಕರಣದ ನಂತರ ನಾಡು ಹಲವು ಬಗೆಯ ಅವಸ್ಥಾಂತರಗಳಿಗೆ ಗುರಿಯಾಗಿದೆ. ಈ ಅವಸ್ಥಾಂತರಗಳಿಗೆ ವಸಾಹತುಶಾಹಿ ಪ್ರಭುತ್ವದ ಪ್ರಭಾವ, ಆಧುನಿಕ ಶಿಕ್ಷಣ, ವಿಜ್ಞಾನ-ತಂತ್ರಜ್ಞಾನ, ಜಾಗತೀಕರಣ ಮೊದಲಾದ ಪ್ರಕ್ರಿಯೆಗಳು ಕಾರಣವಾಗಿವೆ. ಈ ನೆಲೆಗಳಲ್ಲಿ ಅರಸು ಅವರ ಚಿಂತನೆಗಳನ್ನು ವಿಶ್ಲೇಷಿಸುವುದರ ಜೊತೆಗೆ ನಾಡು 'ಮಾದರಿ ರಾಜ್ಯ'ವಾಗುವುದರ ಕಡೆಗೆ ನಡೆಸಿದ ಪ್ರಯತ್ನ ಹಾಗೂ ಒಳನೋಟಗಳನ್ನು ಗುರುತಿಸಬೇಕಿದೆ. ಈ ಅಧ್ಯಯನವು ಸಾಹಿತ್ಯ, ಸಮಾಜ, ರಾಜಕಾರಣ, ಆರ್ಥಿಕತೆ ಹಾಗೂ ಸಾಂಸ್ಕೃತಿಕ ಪರಿಧಿಗಳನ್ನು ಹೊಂದಿರುವಂಥದ್ದು.

## ಅಧ್ಯಯನದ ವಿಧಿ-ವಿಧಾನಗಳು

ಈ ಅಧ್ಯಯನವು ಅರಸು ಅವರ ಚಿಂತನೆಗಳನ್ನು ಚಾರಿತ್ರಿಕವಾಗಿ ದಾಖಲಿಸಿ ವಿಮರ್ಶಾತ್ಮಕವಾಗಿ ವಿಶ್ಲೇಷಣೆ ನಡೆಸುವಂಥದ್ದು. ಅಲ್ಲದೆ ಸಮಕಾಲೀನ ಸಂದರ್ಭದಲ್ಲಿ ಎಲ್ಲಾ ಆಗು-ಹೋಗುಗಳ ನಡುವೆ ತೌಲನಿಕವಾಗಿ ವಿಶ್ಲೇಷಣೆ ಮಾಡಲು ಪ್ರಯತ್ನಿಸುವಂಥದ್ದು. ಹೀಗಾಗಿ ಎಲ್ಲಾ ಬಗೆಯ ಪ್ರಾಥಮಿಕ ಹಾಗೂ ಇತರೆ ಆಕರ ಸಾಮಗ್ರಿಗಳು ಇಲ್ಲಿ ಬಳಕೆಯಾಗಿವೆ. ಅರಸು ಅವರ ಚಿಂತನೆಗಳನ್ನು ಕುರಿತ ನೇರವಾದ ಹಾಗೂ ಪೂರಕವಾಗಿ ದೊರೆಯುವ ಎಲ್ಲಾ ಬಗೆಯ ವಿವರ, ಕಾಗದ-ಪತ್ರ, ದಾಖಲೆಗಳು, ಸಂದರ್ಶನ ಇತ್ಯಾದಿಗಳನ್ನು ಬಳಸಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ರಾಜ್ಯದ ಪತ್ರಾಗಾರಗಳು, ಸರ್ಕಾರಿ ಹಾಗೂ ಖಾಸಗಿ ಗ್ರಂಥಾಲಯಗಳು, ಸಂಘ-ಸಂಸ್ಥೆಗಳನ್ನು ಬಳಸಿಕೊಳ್ಳಲಾಗಿದೆ. ಅಂತೆಯೇ ಬೆಂಗಳೂರಿನ 'ಡಿ. ದೇವರಾಜ ಅರಸು ಅವರ ಸಂಶೋಧನ ಕೇಂದ್ರ'ವನ್ನು ಸಹ. ಹೀಗೆ ಸಂಗ್ರಹಿಸಿದ ಮಾಹಿತಿ, ವಿವರಗಳನ್ನು ವೈಜ್ಞಾನಿಕವಾಗಿ ವರ್ಗೀಕರಿಸಿಕೊಂಡು ಚರಿತ್ರೆಯ ಶಿಸ್ತಿನ ವಿಧಿ-ವಿಧಾನಗಳ ಮೂಲಕ ಪರೀಕ್ಷಿಸಿ ವಿಶ್ಲೇಷಿಸುವ ಪ್ರಯತ್ನ ಇಲ್ಲಿನದು. ಒಟ್ಟಾರೆ ಈ ಅಧ್ಯಯನಕ್ಕೆ ಸಮಾಜ ವಿಜ್ಞಾನಗಳ ಚರಿತ್ರೆಯ ಸಂಶೋಧನಾ ವೈಧಾನಿಕತೆಯನ್ನು ಬಳಸಿಕೊಳ್ಳಲಾಗಿದೆ.

## ಅಧ್ಯಯನದ ಸ್ವರೂಪ

ಡಿ. ದೇವರಾಜ ಅರಸು ಅವರು ಕೈಗೊಂಡ ಕಾರ್ಯಯೋಜನೆಗಳನ್ನು ಮತ್ತು ಅವರ ಚಿಂತನೆಗಳನ್ನು ಕುರಿತು ವಿಶ್ಲೇಷಿಸುವುದೇ ಈ ಅಧ್ಯಯನದ ಸ್ವರೂಪವಾಗಿದೆ.

ಮೊದಲನೆಯ ಅಧ್ಯಾಯವು ಹಿನ್ನೆಲೆ-ಪ್ರವೇಶ-ಸ್ವರೂಪ-ಮಹತ್ವ, ವಿಧಿ-ವಿಧಾನಗಳು ಹಾಗೂ ಮಿತಿಗಳನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯದಲ್ಲಿ ಅರಸು ಅವರ ಜೀವನ-ಪರಿಚಯ-ಪರಿಸರ-ಪ್ರಭಾವವನ್ನು ಮತ್ತು ಅವರ ಕೌಟುಂಬಿಕ ಜೀವನ, ಅವರ ಶಿಕ್ಷಣವನ್ನು ಕುರಿತು ಬರೆಯಲಾಗಿದೆ. ಅಲ್ಲದೆ ಅರಸು ಅವರ ರಾಜಕಾರಣದ ಪ್ರವೇಶದ ನಂತರ ಅವರು ಹಲವು ಬಗೆಯ ಖಾತೆಗಳು, ಮಂತ್ರಿ ಪದವಿಗಳನ್ನು ಪಡೆದು ಆಡಳಿತ ನಡೆಸಿದ ಬದುಕನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ, ಅರಸು ಅವರ ರಾಜ್ಯ ಮತ್ತು ರಾಷ್ಟ್ರದ ರಾಜಕಾರಣದಲ್ಲಿನ ಪ್ರಭಾವ ಮತ್ತು ಅವರು ಮುಖ್ಯಮಂತ್ರಿಯಾಗಿ ಮಾಡಿದ ಸಾಧನೆಗಳನ್ನು ಪರಿಶೀಲಿಸಲಾಗಿದೆ. ಈ ಅವಧಿಯಲ್ಲಿ ಹಿಂದುಳಿದ, ದಲಿತ, ಅಲ್ಪಸಂಖ್ಯಾತರನ್ನು ಸಂಘಟಿಸಿ, ಅವರಿಗೆ ರಾಜಕೀಯ ನೆಲೆಯನ್ನು ಕಲ್ಪಿಸಿಕೊಟ್ಟಿದ್ದನ್ನು ಪರಿಗಣಿಸಲಾಗಿದೆ. ಮತ್ತು ಭೂಸುಧಾರಣೆ ಹಾಗೂ ಹಾವನೂರು ಆಯೋಗದ ನೇಮಕದಂತಹ ಕ್ರಾಂತಿಕಾರಕ ಯೋಜನೆಗಳನ್ನು ಜಾರಿಗೆ ತಂದದ್ದನ್ನು ಕುರಿತು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ದೇವರಾಜ ಅರಸು ಅವರ ಸಾಮಾಜಿಕ ಚಿಂತನೆಗಳನ್ನು ಒಳಗೊಂಡಿದೆ. ಸಮಾಜದ ಕೆಳಸ್ತರದವರ ಏಳಿಗೆಗಾಗಿ ಅನುಷ್ಠಾನಕ್ಕೆ ತಂದ ಹಲವಾರು ಕ್ರಾಂತಿಕಾರಕ ಯೋಜನೆಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಅವರ ಚಿಂತನೆಗಳು ಸಮಕಾಲೀನ ಸಂದರ್ಭದಲ್ಲಿ ಎಷ್ಟು ಪ್ರಸ್ತುತ ಎನ್ನುವುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಅರಸು ಅವರು ಕರ್ನಾಟಕ ರಾಜ್ಯದ ಆರ್ಥಿಕ ಅಭಿವೃದ್ಧಿಯಲ್ಲಿ ಹಾಕಿಕೊಂಡು ಹಲವಾರು ಅಭಿವೃದ್ಧಿ ಯೋಜನೆಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಬಡತನ ನಿರ್ಮೂಲನೆಗೆ ಹಾಕಿಕೊಂಡ ಯೋಜನೆಗಳು ಹಾಗೂ ಗ್ರಾಮೀಣ ಅಭಿವೃದ್ಧಿ ಯೋಜನೆಗಳು, ಕೈಗಾರಿಕೆ, ನೀರಾವರಿ ಯೋಜನೆ, ವಿದ್ಯುತ್ ಯೋಜನೆ ಮುಂತಾದವುಗಳನ್ನು ರಾಜ್ಯ ಮತ್ತು ರಾಷ್ಟ್ರದ ಅಭಿವೃದ್ಧಿಗೆ ಎಷ್ಟರ ಮಟ್ಟಿಗೆ ಅವು ಯಶಸ್ವಿಯಾದವು ಎಂಬುದನ್ನು ಕುರಿತು ಚರ್ಚೆಗೊಳಪಡಿಸುವ ಕಿರುಪ್ರಯತ್ನವೆ ಈ ಅಧ್ಯಾಯ. ಒಟ್ಟಿನಲ್ಲಿ ಅವರು ದೇಶಿಯ ಮತ್ತು ವಿದೇಶಿಯ ನೆಲೆಗಳಿಂದ ದೇಶದ ಪ್ರಗತಿಯನ್ನು ಯಾವ ರೀತಿ ಮಾಡಲು ಸಾಧ್ಯ ಆಯಿತು ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಆರರಲ್ಲಿ ಅರಸು ಅವರು ನಾಡು-ನುಡಿ-ಸಾಹಿತ್ಯ-ಸಂಸ್ಕೃತಿಯ ಬಗ್ಗೆ ತಳೆದ ನಿಲುವುಗಳನ್ನು ಈ ಅಧ್ಯಾಯದಲ್ಲಿ ಬಿಂಬಿಸಲಾಗಿದೆ. ನಾಡು ಏಕೀಕರಣಗೊಂಡ ನಂತರವೂ ತನ್ನದೇ ಆದ ಹೆಸರು ಇರದೇ ಇದ್ದದ್ದು ಕನ್ನಡಿಗರ ಅಂತರಾಳವನ್ನು ಕಲುಕಿತ್ತು. ಈ ಸಂದರ್ಭದಲ್ಲಿ ನವೆಂಬರ್ ೧, ೧೯೭೩ರಲ್ಲಿ ಅರಸುರವರು ಈ ನಾಡಿಗೆ 'ಕರ್ನಾಟಕ' ಎಂದು ನಾಮಕರಣ ಮಾಡಿದ ಐತಿಹಾಸಿಕ ಘಟನೆಯನ್ನು ಸಹ ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಅಂತೆಯೆ ಕೊನೆಯ ಅಧ್ಯಾಯದಲ್ಲಿ (ಏಳನೆಯ) ಪ್ರಸ್ತುತ ಅಧ್ಯಯನದಿಂದ ತಳೆದ ನಿಲುವುಗಳನ್ನು ಅಭಿವ್ಯಕ್ತಿಸಲಾಗಿದೆ.

ಕರ್ನಾಟಕದ ಮುಖ್ಯಮಂತ್ರಿ ಪದವಿಗೇರಲು ಜಾತಿಬಲ ಬೇಕೇ ಬೇಕು ಎಂಬುದನ್ನು ಸುಳ್ಳಾಗಿಸಿದ ಮೊದಲ ವ್ಯಕ್ತಿ ದೇವರಾಜ ಅರಸು. ಅಧಿಕಾರಕ್ಕೇರಿದ ನಂತರ ಅವರ ರಾಜಕೀಯ ಇಚ್ಛಾಶಕ್ತಿ ಎಂದರೆ ಏನು ಎಂಬುದನ್ನು ಹೇಳಿಕೊಟ್ಟರು. ಭೂಸುಧಾರಣೆ, ಹಿಂದುಳಿದ ವರ್ಗಗಳಿಗೆ ಮೀಸಲಾತಿಯನ್ನು ಒದಗಿಸುವಲ್ಲಿ ಅವರು ಕೈಗೊಂಡ ನಿರ್ಧಾರಗಳು ಸರಳವಾದುವುಗಳಲ್ಲ.

ದೇವರಾಜ ಅರಸು ಅವರು ೧೯೧೫ರ ಆಗಸ್ಟ್ ೨೦ರಂದು ಮೈಸೂರು ಜಿಲ್ಲೆಯ ಹುಣಸೂರು ತಾಲೂಕಿನ ಕಲ್ಲಹಳ್ಳಿಯಲ್ಲಿ, ದೇವರಾಜ ಮತ್ತು ದೇವೀರಮ್ಮಣ್ಣಿ ದಂಪತಿಗಳ ಮೊದಲ ಮಗನಾಗಿ ಹುಟ್ಟಿದರು. ಆರಂಭದ ದಿನದಿಂದಲೇ ಅನುಭವಿಸಿದ್ದು ಬಡತನದ ನೋವಿನ ಬದುಕನ್ನು. ಜೊತೆಗೆ ಓದಬೇಕೆಂಬ ದೊಡ್ಡದಾದ ಕನಸು. ಆ ಕನಸುಗಳನ್ನು ನನಸಾಗಿಸಿಕೊಳ್ಳುವ ದಿಕ್ಕಿನಲ್ಲಿ ಸವೆಸಿದ ದಾರಿ ಸುಗಮವಾಗಿ ಇರಲಿಲ್ಲ. ಪ್ರಾಥಮಿಕ ಶಿಕ್ಷಣವನ್ನು ಕಲ್ಲಹಳ್ಳಿಯಲ್ಲೇ ಮಾಡಿದರು. ಮೈಸೂರಿನ ಬೋರ್ಡಿಂಗ್ ಶಾಲೆಯಲ್ಲಿದ್ದು ಹೈಸ್ಕೂಲ್ ಮತ್ತು ಇಂಟರ್ ಮೀಡಿಯಟ್‌ವರೆಗೆ ಶಿಕ್ಷಣ ಪಡೆದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್ಸಿ (ವಿಜ್ಞಾನ) ಪದವಿಯನ್ನು ಪಡೆದರು. ನಂತರ ವಾಪಾಸು ಕಲ್ಲಹಳ್ಳಿಗೆ ಬರಲು ತೀರ್ಮಾನಿಸಿದರು. ಆಗ ಎರಡನೆಯ ಮಹಾಯುದ್ಧದ ಕಾಲ. ಸಾಕಷ್ಟು ಯುವಕರನ್ನು ಸೈನ್ಯಕ್ಕೆ ಸೇರಿಸಿಕೊಳ್ಳಲು ಸರ್ಕಾರದಿಂದ ಪ್ರಯತ್ನ ನಡೆದಿತ್ತು. ಅರಸು ಅವರು ಸೈನ್ಯದಲ್ಲಿ ಲೆಫ್ಟಿನೆಂಟ್ ಆಗಿ ಕೆಲಸ ಮಾಡಲು ಆಯ್ಕೆಗೊಂಡಿದ್ದರು. ಅವರು ಕೆಲಸಕ್ಕೆ ಸೇರಲು ತುಂಬ ಉತ್ಸುಕರಾಗಿದ್ದರು. ಆದರೆ ಅವರ ತಾಯಿ ಒಪ್ಪಿಗೆ ನೀಡದೆ ಇದ್ದುದ್ದರಿಂದ ಆ ನಿರ್ಧಾರವನ್ನು ಕೈಬಿಡಬೇಕಾಯಿತು. ಅಲ್ಲಿಯೇ ಅವರು ಸಂಗೀತದ ಬಗೆಗೆ ಆಸಕ್ತಿ ಹಾಗೂ ಸಾಹಿತ್ಯದಲ್ಲಿ ಅಭಿರುಚಿಯನ್ನು ಬೆಳೆಸಿಕೊಂಡು, ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡರು. ಜೊತೆಗೆ ಗರಡಿ ಮನೆಗೆ ಹೋಗಿ ಕುಸ್ತಿ ಕಲಿತು 'ಪೈಲ್ವಾನ್' ಎನಿಸಿಕೊಳ್ಳುವಷ್ಟು ದೇಹದಾರ್ಢ್ಯವನ್ನು ತಾರುಣ್ಯದಲ್ಲಿಯೇ ಪಡೆದರು.

೧೯೪೧ರಲ್ಲಿ ಅರಸು ಅವರಿಗೆ ರಾಜಕೀಯದ ನಂಟು ಬೆಳೆಯಿತು. ಇವರಿಗೆ ತಾಲೂಕಿನ ಖ್ಯಾತ ವಕೀಲರೊಬ್ಬರ ಸಂಪರ್ಕದಿಂದ ರಾಜಕೀಯದಲ್ಲಿ ಆಸಕ್ತಿ ಕೆರಳಿ ಸಾಹುಕಾರ ಚನ್ನಯ್ಯನವರ ಒತ್ತಾಯಕ್ಕೆ ಮಣಿದು ಸಕ್ರೀಯ ರಾಜಕಾರಣಕ್ಕೆ ಧುಮುಕಿದರು. ೧೯೪೧ರಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್‌ನಿಂದ ಸ್ಪರ್ಧಿಸಿ ಗೆಲುವು ಪಡೆದರು (೧೯೪೮ ರವರೆಗೆ ಮುಂದುವರಿದರು). ೧೯೪೨ರಲ್ಲಿ "ಕ್ವಿಟ್ ಇಂಡಿಯಾ ಚಳವಳಿ"ಯಲ್ಲಿ ಭಾಗವಹಿಸಿ ಸೆರೆಮನೆವಾಸವನ್ನು

ಅನುಭವಿಸಿದರು. ಮುಂದೇ ೧೯೪೩ರಲ್ಲಿ ಅರಸು ಕೋಮಿನ ಚಿಕ್ಕಮ್ಮಣ್ಣಿಯವರನ್ನು ವಿವಾಹವಾಗಿ, ವೈವಾಹಿಕ ಬದುಕನ್ನು ಪ್ರಾರಂಭಿಸಿದರು. ಚಿಕ್ಕಮ್ಮಣ್ಣಿಯವರ ತಂದೆ ಚಿಕ್ಕಣ್ಣ ಅರಸು. ಅವರ ಪೂರ್ವಿಕರು ಹೊನಸೋಗೆಯ ಹತ್ತಿರ ಪುತ್ತೂರಿನಲ್ಲಿ ಕೋಟೆ ಕಟ್ಟಿ ಆಳಿದವರು. ಚಿಕ್ಕಮ್ಮಣ್ಣಿಯವರು ನೆಲಸಿದ್ದು ಕೋಗಿಲೂರಿನಲ್ಲಿ. ಅರಸು ಅವರ ವಿವಾಹ ವಿಜೃಂಭಣೆಯಿಂದ ನಡೆಯಿತು. ಕೋಗಿಲೂರಿನ ಚಿಕ್ಕಮ್ಮಣ್ಣಿ ಕಲ್ಲಹಳ್ಳಿಯ ಮನೆ ತುಂಬಿದರು. ಆದರೆ ಅರಸು ದಂಪತಿಗಳಿಗೆ ಗಂಡು ಸಂತಾನವಾಗಲಿಲ್ಲ. ಚಂದ್ರಪ್ರಭಾ, ನಾಗರತ್ನ ಮತ್ತು ಭಾರತಿ ಎಂಬ ಮೂವರು ಹೆಣ್ಣುಮಕ್ಕಳಿಗೆ ಜನ್ಮವಿತ್ತರು.

೧೯೪೭ರಲ್ಲಿ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿಯುತ ಸರ್ಕಾರದ ಸ್ಥಾಪನೆಗಾಗಿ ನಡೆದ ಹೋರಾಟದಲ್ಲಿ ತಮ್ಮ ಬೆಂಬಲವನ್ನು ಸೂಚಿಸಿದರು. ೧೯೫೨ರಲ್ಲಿ ಪ್ರಥಮ ಬಾರಿಗೆ ಹುಣಸೂರು ಕ್ಷೇತ್ರದಿಂದ ಶಾಸಕರಾಗಿ ಆಯ್ಕೆಯಾದರು. ಅಂದಿನಿಂದಲೇ ಅವರ ವೃತ್ತಿ ರಾಜಕಾರಣ ಆರಂಭಗೊಂಡಿತು ಎಂದು ಹೇಳಬಹುದು. ಅಂದಿನಿಂದ ೧೯೮೨ರ ತನಕ ಸತತವಾಗಿ ಮೂವತ್ತು ವರ್ಷಗಳ ಕಾಲ ಈ ಕ್ಷೇತ್ರದ ಪ್ರತಿನಿಧಿಯಾಗಿ ಸೋಲರಿಯದ ಸರದಾರರಾದರು. ೧೯೫೭ರಲ್ಲಿ ಬಿ.ಡಿ. ಜತ್ತಿಯವರ ಅಧ್ಯಕ್ಷತೆಯಲ್ಲಿ ನೇಮಿಸಲ್ಪಟ್ಟ ಭೂ ಸುಧಾರಣಾ ಸಮಿತಿಯ ಸದಸ್ಯರಾಗಿ ಭೂ ರಹಿತ ರೈತರ ಹಿತ ಸಾಧಿಸಬೇಕೆಂಬ ಅಪೇಕ್ಷೆಯನ್ನು ಹೊಂದಿದ್ದರು. ೧೯೬೨ರಲ್ಲಿ ಚುನಾವಣೆಯಲ್ಲಿ ಅವಿರೋಧವಾಗಿ ಆಯ್ಕೆಯಾದದ್ದು ಸಾಮಾನ್ಯ ಸಂಗತಿಯೇನಲ್ಲ. (ಅದೇ ಚುನಾವಣೆಯಲ್ಲಿ ಎಸ್. ನಿಜಲಿಂಗಪ್ಪನವರು ಹೊಸದುರ್ಗ ಕ್ಷೇತ್ರದಿಂದ ಸ್ಪರ್ಧಿಸಿ ಅನಿರೀಕ್ಷಿತವಾಗಿ ಪರಾಭವಗೊಂಡಿದ್ದರು.)

ಎಸ್. ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿ ಅರಸು ಅವರಿಗೆ ಮೊದಲ ಬಾರಿಗೆ ಮಂತ್ರಿಯಾಗುವ ಯೋಗ ಕೂಡಿಬಂದಿತು. ಅದರಂತೆ ಸಾರಿಗೆ, ಗೃಹನಿರ್ಮಾಣ, ವಸತಿ ಖಾತೆ, ಪಶುಸಂಗೋಪನೆ, ವಾರ್ತೆ, ಮೀನುಗಾರಿಕೆ ಮತ್ತು ರೇಷ್ಮೆ ಖಾತೆಗಳ ಮಂತ್ರಿಯಾಗಿ ಕಾರ್ಯನಿರ್ವಹಿಸಿ ರಾಜಕಾರಣದಲ್ಲಿ ಅಪಾರ ಅನುಭವವನ್ನು ಪಡೆದು ತಮ್ಮ ವ್ಯಕ್ತಿತ್ವವನ್ನು ಗಟ್ಟಿಗೊಳಿಸಿಕೊಂಡರು.

೧೯೬೯ರಲ್ಲಿ ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿದ್ದ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ಪ್ರಧಾನಿ ಇಂದಿರಾಗಾಂಧಿಯವರಿಗೂ ಮತ್ತು ನಿಜಲಿಂಗಪ್ಪನವರಿಗೂ ಭಿನ್ನಾಭಿಪ್ರಾಯ ತಲೆದೋರಿ ಕಾಂಗ್ರೆಸ್ ಪಕ್ಷ ವಿಭಜನೆಯಾಯಿತು. ಈ ಸಂದರ್ಭದಲ್ಲಿ ಕಾಂಗ್ರೆಸ್ 'ಇಂಡಿಕೇಟ್' (ಎಸ್) ಮತ್ತು ಕಾಂಗ್ರೆಸ್ 'ಸಿಂಡಿಕೇಟ್' (ಆರ್) ಎಂದು ವಿಭಾಗವಾದವು. ಈ ಸಂದರ್ಭದಲ್ಲಿ ದೇವರಾಜ ಅರಸು ಇಂದಿರಾಗಾಂಧಿ (ರಾಷ್ಟ್ರೀಯ ಕಾಂಗ್ರೆಸ್ 'ಆರ್')ಯವರ ಬೆಂಬಲಕ್ಕೆ ನಿಂತು ಯುವಕರ ತಂಡದೊಂದಿಗೆ ಕಾಂಗ್ರೆಸ್ ಪಕ್ಷಕ್ಕೆ ನವಚೈತನ್ಯ ತುಂಬಿ ರಾಜ್ಯಮಟ್ಟದ ನಾಯಕರಾಗಿ ಬೆಳೆದರು.

೧೯೭೨ರಲ್ಲಿ ನಡೆದ ರಾಜ್ಯ ವಿಧಾನಸಭೆಯ ಚುನಾವಣೆಯಲ್ಲಿ ಸ್ಪರ್ಧಿಸಿ ತಮ್ಮ ರಾಜಕೀಯ ನೈಪುಣ್ಯತೆ, ಸಂಘಟನಾ ಚಾತುರ್ಯದಿಂದ ಕಾಂಗ್ರೆಸ್ ಪಕ್ಷದ ವಿಜಯದ ರೂವಾರಿಯಾಗಿ, ವಿಧಾನಸಭೆ ಯನ್ನು ಪ್ರವೇಶಿಸಿದರು. ಮುಂದೆ ವಿಧಾನಸಭೆಯಲ್ಲಿ ನಡೆದ ಸರಳ ಸಮಾರಂಭದಲ್ಲಿ, ಕಾಂಗ್ರೆಸ್

ಪಕ್ಷದ ನಾಯಕರಾಗಿ ದಿನಾಂಕ ೨೦.೩.೧೯೭೨ ರಂದು ಕರ್ನಾಟಕ ರಾಜ್ಯದ ಎಂಟನೆಯ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡರು. ಇಲ್ಲಿಂದಲೇ ಕರ್ನಾಟಕದಲ್ಲಿ (ಮೈಸೂರು ರಾಜ್ಯದಲ್ಲಿ) "ಅರಸು ಯುಗ" ಪ್ರಾರಂಭವಾಯಿತೆನ್ನಬಹುದು. ೧೯೭೮ ರಲ್ಲಿ ಅನೇಕ ರೀತಿಯ ಕುತಂತ್ರಗಳ ನಡುವೆಯೂ ಅವೆಲ್ಲವನ್ನು ಮೆಟ್ಟಿ ಮತ್ತೊಮ್ಮೆ ಕಾಂಗ್ರೆಸ್ ಪಕ್ಷವನ್ನು ಅಧಿಕಾರಕ್ಕೆ ತಂದರು. ಎರಡನೆಯ ಅವಧಿಗೆ ಮುಖ್ಯಮಂತ್ರಿಯಾಗಿ ಆಯ್ಕೆಯಾದರು.

೧೯೭೭ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಇಂದಿರಾಗಾಂಧಿಯವರು ಪರಾಭವಗೊಂಡು, ಕತ್ತಲೆಯಲ್ಲಿದ್ದಂಥ ದಿನಗಳಲ್ಲಿ ಅವರೊಂದಿಗಿದ್ದು ಸಂತೈಸಿದ ಅರಸು ಅವರು ೧೯೭೮ ರಲ್ಲಿ ಚಿಕ್ಕಮಗಳೂರು ಲೋಕಸಭಾ ಕ್ಷೇತ್ರದಿಂದ ಇಂದಿರಾಗಾಂಧಿಯವರನ್ನು ಮತ್ತೆ ಲೋಕಸಭೆಗೆ ಆರಿಸಿ ಕಳುಹಿಸಿದರು. ಈ ಮೂಲಕ ರಾಷ್ಟ್ರದ ರಾಜಕಾರಣದಲ್ಲಿ ಹೊಸ ಬೆಳವಣಿಗೆಗೆ ನಾಂದಿಯಾದರು.

ದೇವರಾಜ ಅರಸು ಕರ್ನಾಟಕ ರಾಜ್ಯದಲ್ಲಿ ಅತ್ಯಂತ ಜನಪ್ರಿಯ ಜನಾನುರಾಗಿಯಾಗುತ್ತಿದ್ದುದ್ದನ್ನು ಸಹಿಸಿಕೊಳ್ಳದ ಇಂದಿರಾಗಾಂಧಿಯವರು ೧೯೭೯ರಲ್ಲಿ ಅರಸು ಅವರನ್ನು ಕಾಂಗ್ರೆಸ್ 'ಐ' ಪಕ್ಷದಿಂದ ಉಚ್ಚಾಟಿಸಿದರು. ಆದರೂ 'ಕರ್ನಾಟಕ ಕಾಂಗ್ರೆಸ್' ಎಂಬ ಪಕ್ಷದ ಹೆಸರಿನಿಂದ ಮುಖ್ಯಮಂತ್ರಿಯಾಗಿ ಅಧಿಕಾರದಲ್ಲಿ ಮುಂದುವರಿದರು. ೧೯೮೦ರ ಲೋಕಸಭಾ ಚುನಾವಣೆಯಲ್ಲಿ ಎಲ್ಲಾ ಕ್ಷೇತ್ರಗಳಲ್ಲಿ ಪರಾಭವಗೊಂಡರು. ಫಲಿತಾಂಶ ಪ್ರಕಟಗೊಂಡ ಕೆಲವೇ ಗಂಟೆಗಳಲ್ಲಿ ತಮ್ಮ ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಿ ಪ್ರಜಾಪ್ರಭುತ್ವದಲ್ಲಿ ಅವರಿಗಿದ್ದ ನಂಬಿಕೆಯನ್ನು ಸಾಬೀತುಪಡಿಸಿದರು. ರಾಜಕೀಯದಲ್ಲಿ ಎಂತಹ ವೈಚಾರಿಕ ಲೆಕ್ಕಚಾರಗಳೆಲ್ಲ ತಲೆಕೆಳಗಾಗುತ್ತವೆ ಎನ್ನುವುದಕ್ಕೆ ಇದೊಂದು ಒಳ್ಳೆಯ ಉದಾಹರಣೆ.

ಮುಂದಿನ ದಿನಗಳಲ್ಲಿ ರೈತರ ಪರವಾಗಿ ಪಾದಯಾತ್ರೆ ನಡೆಸಿದ್ದು, ಹಲವಾರು ಹೋರಾಟಗಳನ್ನು ಹಮ್ಮಿಕೊಂಡಿದ್ದು, "ಕ್ರಾಂತಿರಂಗ" ಎಂಬ ಪಕ್ಷವನ್ನು ಹುಟ್ಟುಹಾಕಿದ್ದು ಇವೆಲ್ಲವೂ ಇತಿಹಾಸದ ಘಟನಾವಳಿಗಳಲ್ಲಿ ಸೇರಿವೆ.

ಅರಸು ಅವರ ಹೆಸರು ಮುಖ್ಯಮಂತ್ರಿಯಾಗಿದ್ದರು ಎಂಬ ಕಾರಣಕ್ಕೆ ಉಳಿಯುತ್ತಿಲ್ಲ. ಅಧಿಕಾರ ಸಿಕ್ಕಿದ ಸಂದರ್ಭದಲ್ಲಿ ಅವರು ಮಾಡಿದ ಮಹತ್ತರ ಕಾರ್ಯಗಳು ಇಂದಿಗೂ ಅವರ ಹೆಸರನ್ನು ಚಿರಸ್ಥಾಯಿಯಾಗಿ ಉಳಿಸಿವೆ. ಅರಸು ಮುಖ್ಯಮಂತ್ರಿಯಾಗಿ ಮಾಡಿದ ಮೊದಲ ಕಾರ್ಯವೆಂದರೆ ಭೂಸುಧಾರಣೆ. ಈ ಭೂಸುಧಾರಣೆ ಕಾಯ್ದೆಯನ್ನು ಜಾರಿಗೆ ತಂದು "ಉಳುವವನೆ ಹೊಲದೊಡೆಯ" ಎಂದು ಸಾರಿದರು. ಈ ಕಾಯ್ದೆಯು ಹಿಂದಿನ ಎಲ್ಲ ಕಾಯ್ದೆಗಳಿಗಿಂತಲೂ ಹೆಚ್ಚು ಪರಿಣಾಮಕಾರಿಯಾದದ್ದು ಎಂದು ಹೇಳಬಹುದು. ಇದರಿಂದ ಕೃಷಿ ಕಾರ್ಮಿಕರಿಗೆ ಭೂ ಒಡೆತನವನ್ನು ನೀಡಿ, ನ್ಯಾಯಾಲಯಗಳ ಮೆಟ್ಟಿಲು ಹತ್ತದಂತೆ ಮುಂದಾಲೋಚನೆಯ ಶಾಸನವನ್ನು ಜಾರಿಗೆ ತಂದು, ಇವುಗಳ ಪರಿಹಾರಕ್ಕಾಗಿ ನ್ಯಾಯಾಲಯಗಳಲ್ಲೂ ಪ್ರಶ್ನಿಸಲಾರದಂತೆ, ಪ್ರತಿ ತಾಲೂಕಿಗೊಂದರಂತೆ ಭೂ ನ್ಯಾಯಮಂಡಳಿಯನ್ನು ಜನತಾ ಪ್ರತಿನಿಧಿಗಳ ಸಮೇತ ನೇಮಿಸಿದರು. ಈ ಯೋಜನೆಯ ಅನುಷ್ಠಾನಕ್ಕೆ ತಮಗಿರುವ ಬದ್ಧತೆಯನ್ನು, ನಿಷ್ಠೆಯನ್ನು ಸಾರಿದರು.

೧೯೭೩ ನವೆಂಬರ್ ೧ ರಂದು 'ಕರ್ನಾಟಕ'ವೆಂದು ಈ ರಾಜ್ಯಕ್ಕೆ ನಾಮಕರಣ ಮಾಡಿದರು. ಅಲ್ಲದೆ ಕನ್ನಡವನ್ನು ಆಡಳಿತ ಭಾಷೆಯನ್ನಾಗಿಸುವ ಸಲುವಾಗಿ ಕ್ರಾಂತಿಕಾರಿ ನಿಲುವುಗಳನ್ನು ಕೈಗೊಂಡ ವ್ಯಕ್ತಿ ಅರಸು ಅವರು. ಸಾಹಿತ್ಯ-ಸಂಸ್ಕೃತಿಗಳ ಬೆಳವಣಿಗೆಗಾಗಿ ಉದಾರವಾದ ಆರ್ಥಿಕ ನೆರವು ನೀಡಿದ ಅಪ್ಪಟ ಕನ್ನಡ ಜನನಾಯಕ. ಅರಸು ಈ ನಾಡು-ನುಡಿಗಾಗಿ ಶೋಷಿತ ವರ್ಗಗಳ ಉನ್ನತಿಗಾಗಿ ಮಾಡಿದ ಕಾರ್ಯಕ್ರಮಗಳು ಅವರನ್ನು ಹಿಂದುಳಿದ ವರ್ಗದ ಅಭಿವೃದ್ಧಿಯ ಹರಿಕಾರರನ್ನಾಗಿಸಿದ್ದವು.

'ಭಾಗ್ಯಜ್ಯೋತಿ' ಯೋಜನೆ, ವೃದ್ಧಾಪ್ಯ ಯೋಜನೆ, ಅಂಗವಿಕಲರಿಗಾಗಿ ಪಿಂಚಣಿ ಮತ್ತು ನಿರುದ್ಯೋಗಿ ವಿದ್ಯಾರ್ಥಿಗಳಿಗೆ ಸ್ಟೈಪಂಡರಿ ಕೊಡುವ ಯೋಜನೆಯನ್ನು ಜಾರಿಗೆ ತಂದ ರಾಜ್ಯದ ಪ್ರಪ್ರಥಮ ಮುಖ್ಯಮಂತ್ರಿ ಅರಸು ಅವರಾಗಿದ್ದಾರೆ. ಇವರ ಆಳ್ವಿಕೆಯ ಅವಧಿಯಲ್ಲಿ 'ಗರೀಬಿ ಹಠಾವೋ' ಮತ್ತು 'ಜೈ ಕಿಸಾನ್', 'ಜೈ ಗರೀಬ್' ಎಂಬ ಘೋಷಣೆಗಳು ಮೊಳಗಿದವು. ಮತ್ತು ಇಂದಿರಾಗಾಂಧಿಯವರ 'ಗರೀಬಿ ಹಠಾವೋ' ಆಂದೋಲನ ಹಾಗೂ '೨೦ ಅಂಶ'ಗಳ ಕಾರ್ಯಕ್ರಮವನ್ನು ಅರ್ಥಪೂರ್ಣವಾಗಿ ಜಾರಿಗೊಳಿಸಿದ ಪ್ರಪ್ರಥಮ ನಾಯಕರಾಗಿದ್ದಾರೆ.

ಅರಸು ಅವರಿಗೆ ಒಡನಾಡಿಗಳಾಗಿದ್ದವರು ಅವರ ಮಾನವೀಯ ಗುಣ, ವಿಶಾಲ ಹೃದಯ, ಹೂವಿನಂತ ಗುಣ, ಮನಸ್ಸುಗಳಿಂದಾಗಿ ನೆನೆಯುತ್ತಲೇ ಇರುತ್ತಾರೆ. ಮನೆಯ ಮುಂದೆ ಸದಾ ನಿಂತಿರುವ ಸಾಮಾನ್ಯ ಕಾರ್ಯಕರ್ತರ ಬದುಕಿನ ಬಗ್ಗೆ ಚಿಂತಿಸಿ ಅವರ ಹಸಿದ ಕುಟುಂಬಗಳ ಬಗ್ಗೆ ಮುಖ ನೋಡಿದೊಡನೆ ಅವರ ಮನದಲ್ಲಿರುವ ನೋವುಗಳನ್ನು ಅರಿತು ಸ್ಪಂದಿಸುತ್ತಿದ್ದ ಅರಸುರವರ ವ್ಯಕ್ತಿತ್ವವನ್ನು ಯಾರೂ ಮರೆಯುವಂತಿಲ್ಲ.

ಅರಸು ತಮ್ಮ ಧೀಮಂತಿಕೆಯನ್ನು ಕೇವಲ ವಸ್ತ್ರದಲ್ಲಿ ತೋರಿಸಲಿಲ್ಲ. ಅದನ್ನು ನಡವಳಿಕೆಯಲ್ಲಿ ಮೆರೆಸಿದರು. ಅವರು ಸಹ ಎಲ್ಲರಂತೆ ಸಾಮಾನ್ಯ ಮಾನವರು. ಅವರಲ್ಲಿದ್ದ ತಪ್ಪುಗಳನ್ನು ಹುಡುಕು ವುದಕ್ಕಿಂತ ಅವರಲ್ಲಿದ್ದ ಮೆಚ್ಚಿಕೊಳ್ಳಬಹುದಾದ ಗುಣಗಳನ್ನು ಒಪ್ಪಿಕೊಳ್ಳಬಹುದು ಅನ್ನಿಸುತ್ತದೆ.

ಅರಸು ಅವರು ತಮ್ಮಲ್ಲಿಗೆ ಸಹಾಯ ಬೇಡಿಬಂದವರಿಗೆ, ಆಡಳಿತ ಪಕ್ಷ, ವಿರೋಧ ಪಕ್ಷ, ತನ್ನ ಶತ್ರು, ತನ್ನ ಮಿತ್ರ ಎಂದು ಭೇದಭಾವ ಮಾಡುತ್ತಿರಲಿಲ್ಲ. ಸಹಾಯ ಬೇಡಿ ಬಂದಿದ್ದಾನೆ ಸಹಾಯ ಮಾಡಬೇಕಷ್ಟೇ ಎಂಬ ನಿಲುವು ಅವರದಾಗಿತ್ತು. ೧೯೭೫ರಲ್ಲಿ ತುರ್ತು ಪರಿಸ್ಥಿತಿಯನ್ನು ರಾಷ್ಟ್ರದಾದ್ಯಂತ ಕೇಂದ್ರ ಸರ್ಕಾರ ಜಾರಿಗೆ ತಂದ ಸಂದರ್ಭದಲ್ಲಿಯೂ ವಿರೋಧ ಪಕ್ಷದ ನಾಯಕರ ಬಗ್ಗೆ ಅತ್ಯಂತ ಪ್ರೀತಿಯಿಂದಲೇ ವರ್ತಿಸುತ್ತಾ ಎಂದೂ ಸಹ ಯಾರ ಮನಸ್ಸಿಗೂ ಘಾಸಿಯನ್ನುಂಟು ಮಾಡುವ ಪ್ರಸಂಗಗಳು ನಡೆಯದಂತೆ ಎಚ್ಚರ ವಹಿಸಿದ್ದರು. ತಾವು ಹಿಂದುಳಿದ ವರ್ಗದ ನಾಯಕ ರೆಂದು ಯಾರು ಬೇಕಾದರು ಹೇಳಿಕೊಳ್ಳಬಹುದು. ಆದರೆ ಈ ನಾಯಕ ಪಟ್ಟವನ್ನು ಜನತೆ ಮನಸಾರೆ ನೀಡಿರುವುದು ಅರಸು ಅವರಿಗೆ ಮಾತ್ರ. ಹಿಂದುಳಿದ ವರ್ಗದ ನಾಯಕರೆಂದು ಆ ವರ್ಗದ ಜನರ ಬೆಂಬಲವನ್ನು ಪಡೆಯಲು ಎಂದೂ ಪ್ರಯತ್ನಿಸದೇ, ಆ ಜನರ ಬದುಕಿಗೆ ಬೇಕಾದ ಯೋಜನೆಗಳನ್ನು

ರೂಪಿಸಿ ಅನುಷ್ಠಾನಗೊಳಿಸಿದರು ಸಹ ಇದನ್ನು ಹೇಳಿಕೊಂಡು ಬೆಂಬಲ ಯಾಚಿಸಲಿಲ್ಲ. ಹಾಗೆಯೆ ಬೆಂಬಲಿಸಲಿಲ್ಲ ಎಂದೂ ಹೀಯಾಳಿಸಲಿಲ್ಲ. ಇದರಿಂದಾಗಿಯೇ ಅರಸು ಅವರನ್ನು ಕರ್ನಾಟಕ ರಾಜಕಾರಣದ 'ಧೀಮಂತ ಜನನಾಯಕ' ಎಂದು ಹೇಳಬಹುದು.

## ಅರಸು : ಕೌಟುಂಬಿಕ ಪರಿಸರ

ದೇವೀರಮ್ಮಣ್ಣಿಯವರ ತಾಯಿಗೆ ಗಂಡುಮಕ್ಕಳಾಗದಿದ್ದ ಕಾರಣ ಬೆಟ್ಟದಪುರದ ದೇವರಾಜ ಅರಸು ಅವರನ್ನು, ಅರಮನೆಯ ಅಳಿಯನಾಗಿ ಕಲ್ಲಹಳ್ಳಿಯಲ್ಲಿ ಬಂದು ನೆಲಸುವಂತೆ ಮಾಡಿದರು. ಜೈನ ಕ್ಷತ್ರಿಯ ಕುಟುಂಬದವರಾದರೂ ವ್ಯವಸಾಯ ಇವರ ಕುಟುಂಬದ ಮೂಲವೃತ್ತಿಯಾಗಿತ್ತು.

ಅರಸು ಅವರ ಕುಟುಂಬದಲ್ಲಿನ ಸದಸ್ಯರು ಅರಸುರವರ ಜೀವನ ಏಳಿಗೆಗೆ ತುಂಬ ಶ್ರಮಿಸಿದರು. ತಮ್ಮ ಕೆಂಪರಾಜ ಅರಸು ಮತ್ತು ಪುಟ್ಟರಾಜ ಅರಸು (ಚಿಕ್ಕವಯಸ್ಸಿನಲ್ಲೇ ತೀರಿ ಕೊಂಡರು.). ಆದರೆ ತಮ್ಮ ಕೆಂಪರಾಜ ಅರಸು ರಾಜಕೀಯ ಸಂಘಟನೆಯಲ್ಲಿ ದೇವರಾಜ ಅರಸು ಅವರಿಗೆ ಸಾಕಷ್ಟು ಪ್ರೇರಣೆ ನೀಡಿದರು. ತಾವು ಸ್ವತಃ ಸಾಹಿತ್ಯ ಕ್ಷೇತ್ರಕ್ಕೆ ಒತ್ತು ನೀಡಿದ್ದರೂ, ಅಣ್ಣನಿಗೆ ರಾಜಕಾರಣದಲ್ಲಿ ಸೂಕ್ತ ವಿಚಾರಗಳನ್ನು ಕೊಡುತ್ತಿದ್ದರು. ಅರಸು ಮನೆತನ ಅಷ್ಟೇನೂ ಶ್ರೀಮಂತವಲ್ಲದಿದ್ದರೂ ಅನುಕೂಲಸ್ಥ ರೈತ ಕುಟುಂಬವಾಗಿತ್ತು. ಉಳಲು ಬೇಕಾದಷ್ಟು ಭೂಮಿ ಇತ್ತು. ಕಲ್ಲಹಳ್ಳಿಯ ಪರಿಸರವನ್ನು ಬಹು ಆತ್ಮೀಯವಾಗಿ ಕಂಡಿದ್ದ ಅರಸು ಅಲ್ಲಿನ ಅಭಿವೃದ್ಧಿಗಾಗಿ ಕೆಲಸ ಮಾಡಿದರೂ ಹಳ್ಳಿಗರ ಮೂಲ ಬದುಕನ್ನು ರೂಪಿಸುವ ಕೃಷಿಯ ಬದುಕನ್ನು ಗಾಢವಾಗಿ ಪ್ರೀತಿಸುತ್ತಿದ್ದರು. ಆ ದಿನಗಳಲ್ಲೆ ಈ ಹಳ್ಳಿಯ ನಿಸರ್ಗದ ಚೆಲುವು ಬಾಲಕನ ಮೇಲೆ ಪ್ರಭಾವ ಬೀರಿರಬಹುದು. ಸ್ವತಃ ಹೊಲ-ಗದ್ದೆಗಳಲ್ಲಿ ಮೈಮುರಿದು ದುಡಿದ ಕೃಷಿಕನಾಗಿ, ಕಟ್ಟಿಗೆ ವ್ಯಾಪಾರಿಯಾಗಿ, ಹೋರಿ ಅಥವಾ ಎತ್ತುಗಳನ್ನು ಮೇಯಿಸುವ ದನಗಾಹಿಯಾಗಿ ತಮ್ಮ ಬದುಕನ್ನು ನಡೆಸಿದರು.

## ಸೈದ್ಧಾಂತಿಕವಾಗಿ ಅರಸು ಅವರು ರೂಪುಗೊಳ್ಳಲು ಅವರ ಮೇಲೆ ಆದಂಥ ಪ್ರಭಾವ

ದೇವರಾಜ ಅರಸು ಮತ್ತು ಅವರ ತಮ್ಮನಾದ ಕೆಂಪರಾಜ ಅರಸು ಅವರ ಮೇಲೆ ತಾಯಿ ದೇವಿರಮ್ಮಣ್ಣಿ, ಅಜ್ಜಿ ಅನಂತಮಣ್ಣಿ ಈ ಎಳೆಯ ಬಾಲಕರ ಮೇಲೆ ತುಂಬಾ ಪ್ರಭಾವ ಬೀರಿದರು. ವಂಶದ ಪ್ರತಾಪಗಳನ್ನು ಮಕ್ಕಳಿಗೆ ಬಣ್ಣಿಸಿ ಹೇಳುತ್ತಿದ್ದ ಇವರು "ಆತ್ಮಬಲ, ಬುದ್ಧಿಬಲ, ದೇಹಬಲ"ಗಳನ್ನು ಬೆಳೆಸಿಕೊಳ್ಳಲು ಪ್ರೇರೇಪಿಸುತ್ತಿದ್ದರು. ಅದೇ ರೀತಿ ಮಾನವೀಯ ಗುಣಗಳನ್ನು ಬೆಳೆಸಿಕೊಳ್ಳಲು ಪ್ರೋತ್ಸಾಹಿಸಿದರು. ಕಷ್ಟದಲ್ಲಿದ್ದವರನ್ನು ಕಂಡು ಕನಿಕರಪಡಬೇಕು, ಬೇಡಿದವರಿಗೆ ತಿರಸ್ಕಾರ ಮಾಡಬಾರದು, ನುಡಿದುದ್ದನ್ನು ಸಾಧಿಸಿ ತೋರಿಸುವ ಛಲ ಬೆಳೆಸಿಕೊಳ್ಳಬೇಕು ಎಂದು ಅವರು ಮಕ್ಕಳನ್ನು ಮುಂದಿನ ಜೀವನಕ್ಕೆ ಅಣಿಗೊಳಿಸುತ್ತಿದ್ದರು. ಪರಂಪರಾಗತವಾಗಿ ಬಂದ ಈ ಗುಣ-ವಿಶೇಷಣಗಳೆಲ್ಲ ಅರಸುರವರ ಮುಂದಿನ ಭವಿಷ್ಯಕ್ಕೆ ಒತ್ತುಕೊಟ್ಟವು. ಮುಂದೆ ಶಾಲಾ-ಕಾಲೇಜು

ದಿನಗಳಲ್ಲಿ ಬಸವಣ್ಣ, ಗಾಂಧೀಜಿ, ಅಂಬೇಡ್ಕರ್, ಲೋಹಿಯಾ, ಜಯಪ್ರಕಾಶ ನಾರಾಯಣ, ಮಾರ್ಕ್ಸ್, ಲೆನಿನ್‌ರಂತಹ ಸಮಾಜ ಸುಧಾರಕರ ಮತ್ತು ಅವರ ಮಾನವತವಾದಿ ಚಿಂತನೆಗಳಿಂದ ಸಮಾನತೆಯ ಸಿದ್ಧಾಂತಗಳಿಗೆ ಮಾರು ಹೋದರು. ಸಮಾನತೆಯಲ್ಲಿ ನಂಬಿಕೆಯಿಟ್ಟಿದ್ದ ಅರಸು, ಕೂಲಿಕಾರ್ಮಿಕರ, ಹಿಂದುಳಿದವರ ಮತ್ತು ದಲಿತರ ಏಳಿಗೆಗೆ ಹಲವಾರು ಯೋಜನೆಗಳನ್ನು ರೂಪಿಸಿ ಸಮಗ್ರ ಕರ್ನಾಟಕದ ಅಭಿವೃದ್ಧಿಗೆ ಕಾರಣರಾದರು. ಭಾರತೀಯರು ಸ್ವಾತಂತ್ರ್ಯ ಪಡೆಯುವಲ್ಲಿ ಪ್ರಮುಖ ಪಾತ್ರವಹಿಸಿದ್ದ ಕ್ರಾಂತಿಕಾರಿ ನಾಯಕ ಸುಭಾಷ್ ಚಂದ್ರಬೋಸ್‌ರನ್ನು ತಮ್ಮ ಆರಾಧ್ಯ ದೈವವನ್ನಾಗಿ ಸ್ವೀಕರಿಸಿದರಲ್ಲದೆ, ಅವರ ಬಗ್ಗೆ ಅಪಾರ ಗೌರವ, ವಿಶ್ವಾಸ ಹೊಂದಿದ್ದರು, ಹಾಗೂ ಇವರ ಕ್ರಾಂತಿಕಾರಕ ವಿಚಾರಗಳನ್ನು ಮೆಚ್ಚಿಕೊಂಡಿದ್ದರು. ಅಲ್ಲದೆ ಕುವೆಂಪು, ಕಾರಂತ, ಬೇಂದ್ರೆ, ಮಾಸ್ತಿಯಂಥವರ ವಿಚಾರಗಳನ್ನೂ ತಮ್ಮ ವ್ಯಕ್ತಿತ್ವದಲ್ಲಿ ಅಳವಡಿಸಿಕೊಂಡರಲ್ಲದೆ ವೈಚಾರಿಕವಾಗಿ ಗಾಂಧೀಜಿಯವರ ಚಿಂತನೆಗಳನ್ನು ಜಾರಿಗೆ ತರಲು ಚಿಂತಿಸುತ್ತಿದ್ದರು. ಇನ್ನೂ ಹೆಚ್ಚಿಗೆ ಹೇಳಬೇಕೆಂದರೆ ಅಧಿಕಾರದ ದೃಷ್ಟಿಯಿಂದ ಪ್ರಭಾವ ಬೀರಿದ್ದೆಂದರೆ ಕೌಟಿಲ್ಯನ 'ಅರ್ಥಶಾಸ್ತ್ರ'. ಇದು ಅವರ ವಿಚಾರ ಗಳನ್ನು ಬೆಳೆಸಿಕೊಳ್ಳಲು ಸಹಾಯಕವಾಯಿತು. ಅಧಿಕಾರವನ್ನು ಚಲಾಯಿಸಲು, ಅದನ್ನು ಉಳಿಸಿಕೊಳ್ಳಲು ಏನು ಹುಟ್ಟುಹಾಕಬೇಕು ಎಂಬುದನ್ನು ಅದರಿಂದ ಕಲಿತುಕೊಂಡೆ ಎಂದು ಹೇಳುತ್ತಿದ್ದರು. ಹೀಗೆ ಅರಸರು ಸಾಮಾಜಿಕ ಚಿಂತನೆಗಳ ಮತ್ತು ಚಿಂತನಾಕಾರರ ವಿಚಾರಗಳಿಂದ ಪ್ರಭಾವಿತರಾಗಿ ಹಿಂದುಳಿದ ಹಾಗೂ ದಲಿತ, ಅಲ್ಪಸಂಖ್ಯಾತರಿಗೆ ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕವಾಗಿ ಸಮಾನತೆ ಒದಗಿಸಿಕೊಟ್ಟು ಸಮಾಜದಲ್ಲಿ ಕ್ರಾಂತಿಕಾರಕ ಪರಿವರ್ತನೆಗೆ ನಾಂದಿ ಹಾಡಿದರು. ಕರ್ನಾಟಕ ರಾಜ್ಯದ ರಾಜಕಾರಣದಲ್ಲಷ್ಟೇ ಅಲ್ಲದೆ ರಾಷ್ಟ್ರದ ರಾಜಕಾರಣದಲ್ಲೂ ತಮ್ಮ ವ್ಯಕ್ತಿತ್ವದ ಬೆಳಕು ಚೆಲ್ಲಿದ ಧೀಮಂತ ನಾಯಕರಾಗಿದ್ದಾರೆ.

## ದೇವರಾಜ ಅರಸರ ಕೊನೆಯ ದಿನಗಳು

ಡಿ. ದೇವರಾಜ ಅರಸರ ಸಾವು ಕಾಲಗರ್ಭದಲ್ಲಿ ಹುದುಗಿ ಹೋದ ಒಂದು ನಿಗೂಢ ರಹಸ್ಯ. ಬಾಳಿಗೂ ಗಡಿಯಿದೆ. ಸಾಮರ್ಥ್ಯಕ್ಕೂ ಒಂದು ಮಿತಿಯಿದೆ. ಕೇವಲ ಅಲ್ಪಾವಧಿಯಲ್ಲೇ ವಿಪುಲವಾದ ಸಾಧನೆಗಳನ್ನು ಮಾಡಿದ್ದರಿಂದ ಶಕ್ತಿಯ ಶೋಷಣೆ ಮಾಡಿದಂತಾಗಿ, ಸಾವಕಾಶವಾಗಿ ತಮ್ಮ ಗರಿವಿಲ್ಲದಂತೆ ಪತನದತ್ತ ಸಾಗತೊಡಗಿದರು. ಅರಸು ತಮ್ಮ ಜೀವಂತ ಬದುಕಿನ ಎದುರಿನಲ್ಲಿಯೇ ತನಗೆ ತನ್ನವರಿಂದ ಆತ್ಮಶಕ್ತಿಯ ನಿರೀಕ್ಷಿಸುವ ಸಂದರ್ಭದಲ್ಲಿಯೇ ವಿಶ್ವಾಸದ್ರೋಹಕ್ಕೆ ಬಲಿಯಾಗಿ ನಿಸ್ಸಹಾಯಕ ಸ್ಥಿತಿಗೆ ತಲುಪಿ ದುರಂತಕ್ಕೆ ತಲುಪಬೇಕಾಯಿತು. ಅಧಿಕಾರದ ಉತ್ಕರ್ಷದಲ್ಲಿನ ಗೆಳೆಯರೆಲ್ಲ ಅಜ್ಞಾತವಾಸದಲ್ಲಿದ್ದಾಗ ತಾವೂ ಅಜ್ಞಾತರಾದರು. ಅವರ ರಾಜಕೀಯ ಅವಸಾನವು ಆರಂಭವಾದ ಮೇಲೆ ಕೊನೆಯ ದಿನದವರೆಗೂ ಅರಸರ ಜೊತೆಯಲ್ಲಿದ್ದವರೆಂದರೆ ಜೆ.ಎಚ್. ಪಟೇಲ್‌ರು (ಕಟ್ಟಾ ಸಮಾಜವಾದಿ ನಾಯಕ). ಯಾರೂ ಕೈಬಿಟ್ಟರೂ ಪಟೇಲರು ಕೈಬಿಡುವುದಿಲ್ಲ ಎಂಬ ಅಪಾರವಾದ ನಂಬಿಕೆ, ವಿಶ್ವಾಸ ಅರಸುರವರಲ್ಲಿತ್ತು.

ಜೂನ್ ೬ರ ಭಾನುವಾರದ ದಿವಸ ಅರಸರ ಬದುಕಿನ ಕೊನೆಯ ದಿನ. ಅಂದು ಹೆಚ್ಚು ಚಟುವಟಿಕೆಯಿಂದ ಕೂಡಿದ್ದ ಅರಸರು ಬೆಳಗಿನಿಂದಲೇ ಲೋಕದಳದ ನಾಯಕ ಜಾರ್ಜ್‌ಫರ್ನಾಂಡೀಸ್, ಜೆ.ಎಚ್. ಪಟೇಲರೊಂದಿಗೆ ಮಧ್ಯಾಹ್ನ ಮೂರು ಗಂಟೆಯವರೆಗೂ ಮಹತ್ವದ ಮಾತುಕತೆಯಲ್ಲಿ ತೊಡಗಿದ್ದ ಅರಸು ಕಾಲನಕರೆಗೆ ಒಗೊಡಬೇಕಾಯಿತು. ಎಂಟು ವರ್ಷಗಳ ಕಾಲ ಅಖಂಡವಾಗಿ ನಾಡಿನ ಚುಕ್ಕಾಣಿ ಹಿಡಿದು ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ಸಾಂಸ್ಕೃತಿಕ ಹಾಗೂ ರಾಜಕೀಯದಲ್ಲಿ ಕ್ರಾಂತಿಕಾರ ಹೊಸ ಬದಲಾವಣೆಗೆ ನಾಂದಿ ಹಾಡಿ, ದಲಿತ, ಹಿಂದುಳಿದ, ಅಲ್ಪಸಂಖ್ಯಾತರಿಗೆ ರಾಜಕೀಯ ಹಾಗೂ ಶೈಕ್ಷಣಿಕವಾಗಿ ಹೊಸ ಬದುಕು ಕಲ್ಪಿಸಿಕೊಟ್ಟು, ಋಣಪರಿಹಾರ, ಜೀತಪದ್ಧತಿ, ಅಸ್ಪೃಶ್ಯತೆಯನ್ನು ಸಂಪೂರ್ಣ ಬೇರು ಸಮೇತ ಕಿತ್ತು ಹಾಕಲು ಶ್ರಮಿಸಿದರು. ಅಲ್ಲದೆ ಕರ್ನಾಟಕವನ್ನು ಆರ್ಥಿಕವಾಗಿ ಬಲಪಡಿಸಿದರು. ಕರ್ನಾಟಕ ರಾಜಕಾರಣದಲ್ಲಿ ರವಿಯಂತೆ ಬೆಳಗಿದ ಧೀಮಂತ ಪುರುಷ ದೇವರಾಜ ಅರಸರು ೧೯೮೨ರ ಜೂನ್ ೬ ರಂದು ಬಾಳಪರದೆಯ ಹಿಂದೆ ಸರಿದರು. ಅಲ್ಲಿಗೆ ಅವರ ರಾಜಕೀಯ ಇತಿಹಾಸದ ಒಂದು ವರ್ಣರಂಜಿತ ಬದುಕು ಕೊನೆಗೊಂಡಿತು.

ಅರಸರ ಆಕಸ್ಮಿಕ ಮರಣದ ವಾರ್ತೆ ನಾಡಿನ ಮನೆ-ಮನಗಳನ್ನು ಮಿಂಚಿನಂತೆ ತಲುಪಿತು. ಅಗಲಿದ ಜನನಾಯಕನ ಅಂತಿಮ ದರ್ಶನಕ್ಕೆ ಜನಸಾಗರವೇ ಹರಿದುಬಂತು. 'ಶರಣರ ಸಾವನ್ನು ಮರಣದಲ್ಲಿ ನೋಡು' ಎನ್ನುವಂತೆ ಅಗಲಿದ ನಾಯಕರಿಗೆ ಶ್ರದ್ಧಾಂಜಲಿ ಸಲ್ಲಿಸಲು ನಾಡಿನ-ರಾಷ್ಟ್ರದ ನಾಯಕ ವರ್ಗವೆಲ್ಲ ಅಲ್ಲಿ ನೆರೆದಿತ್ತು. ಮಾರನೆ ದಿನ ಸಕಲ ಸರ್ಕಾರಿ ಗೌರವಗಳೊಂದಿಗೆ ಬೆಂಗಳೂರಿನಿಂದ ಹೊರಟ ಶವಯಾತ್ರೆ ಕಲ್ಲಳ್ಳಿಯನ್ನು ತಲುಪುವವರೆಗೂ ದಾರಿಯುದ್ದಕ್ಕೂ ಲಕ್ಷಾಂತರ ಜನಸ್ತೋಮ ಈ ಧೀಮಂತ ನಾಯಕನಿಗೆ ಅಶ್ರುತರ್ಪಣ ಮಿಡಿದು ನಮನ ಸಲ್ಲಿಸಿತು. ಕರ್ನಾಟಕ ರಾಜ್ಯದ ಅಂದಿನ ಮುಖ್ಯಮಂತ್ರಿಯಾದ ಆರ್. ಗುಂಡುರಾವ್, ಮಾಜಿ ಪ್ರಧಾನಿ ಚೌಧರಿ ಚರಣ್‌ಸಿಂಗ್‌ರಂಥ ರಾಷ್ಟ್ರದ ಹಿರಿಯ ನಾಯಕರೆಲ್ಲರು ಆಗಮಿಸಿ ಗೌರವ ಸಲ್ಲಿಸಿದರು. ಆದರೆ ಅರಸುರವರಿಂದ ರಾಜಕೀಯ ಮರುಜನ್ಮ ಪಡೆದ ಪ್ರಧಾನಿ ಇಂದಿರಾಗಾಂಧಿಯವರು ಮಾತ್ರ ಸೌಜನ್ಯದ ನಡವಳಿಕೆಯನ್ನು ತೋರದೆ, ಅರಸರ ಅಂತಿಮ ಶವಸಂಸ್ಕಾರಕ್ಕೂ ಬಾರದೆ ಇದ್ದದು ಸೋಜಿಗವೇ ಸರಿ.

ಅಧ್ಯಾಯ ೩

# ಅರಸು: ಹೊಸ ರಾಜಕಾರಣದ ಹರಿಕಾರ

೩.೧. 'ಕರ್ನಾಟಕ ಕಾಂಗ್ರೆಸ್ ಪಕ್ಷ' ಸ್ಥಾಪಕರಾಗಿ ಅರಸು

೩.೨. ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಾಗಿ ಅರಸು

೩.೩. 'ಕ್ರಾಂತಿರಂಗ ಪಕ್ಷ'ದ ಸ್ಥಾಪನೆ

ಕರ್ನಾಟಕ ರಾಜಕಾರಣದಲ್ಲಿ ನಾಲ್ಕು ದಶಕಗಳ ಕಾಲ ತನ್ನದೇ ಆದ ರಾಜಕೀಯ ಮುತ್ಸದ್ದಿತನವನ್ನು ತೋರಿದ ಧೀಮಂತ ವ್ಯಕ್ತಿ ದೇವರಾಜ ಅರಸು. ರಾಜ್ಯದ ರಾಜಕಾರಣಕ್ಕೆ ಸುಲಭವಾಗಿ ಮಾರ್ಪಡಿಸಲಾಗದ ಒಂದು ಹೊಸ ತಿರುವನ್ನು ಕೊಟ್ಟು, ಬಹುಜನರ ಮನಸ್ಸಿನಲ್ಲಿ ಉಳಿಯುವ ನಾಯಕರಾಗಿದ್ದಾರೆ.

ಸ್ವಾತಂತ್ರ್ಯ ನಂತರದಲ್ಲಿ ಎರಡೂವರೆ ದಶಕಗಳಷ್ಟು ಕಾಲ ಅಧಿಕಾರದ ಪ್ರಾಬಲ್ಯದಲ್ಲಿ ಮೆರೆದಿದ್ದ ಮೇಲ್ವರ್ಗದವರಾದ ವೀರಶೈವ, ಒಕ್ಕಲಿಗ, ಬ್ರಾಹ್ಮಣ ಶಕ್ತಿಗಳನ್ನು ಗಣನೀಯವಾಗಿ ನಿಷ್ಕ್ರಿಯಗೊಳಿಸಿದರು. ಅಲ್ಲದೆ ಸಮಾಜದ ಹಿಂದುಳಿದವರಲ್ಲಿ ಜಾಗೃತಿ ಮೂಡಿಸಲು ಹಾಗೂ ಪರ್ಯಾಯ ನಾಯಕತ್ವ ಬೆಳೆಸಲು ಅವಿರತವಾಗಿ ಶ್ರಮಿಸಿದ ಕೀರ್ತಿ ಅರಸು ಅವರಿಗೆ ಸಲ್ಲುತ್ತದೆ.

೧೯೪೧ ರಲ್ಲಿ ದೇವರಾಜ ಅರಸು ಅವರು ಸಾಹುಕಾರ ಚನ್ನಯ್ಯನವರ ಒತ್ತಾಯಕ್ಕೆ ಮಣಿದು ಸಕ್ರಿಯ ರಾಜಕಾರಣಕ್ಕೆ ಧುಮುಕಿದರು. ಮೈಸೂರು ಮಹಾರಾಜರ ಬೆಂಬಲಿಗರ ಪಕ್ಷದ ವಿರುದ್ಧ ಕಾಂಗ್ರೆಸ್‌ನಿಂದ ಪ್ರಜಾಪ್ರತಿನಿಧಿ ಸಭೆಗೆ ನಡೆದ ಚುನಾವಣೆಯಲ್ಲಿ ಹುಣಸೂರು ಕ್ಷೇತ್ರದಿಂದ ಸ್ಪರ್ಧಿಸಿ ಗೆಲುವು ಸಾಧಿಸಿದರು. ಇಲ್ಲಿ ಸಾಹುಕಾರ ಚನ್ನಯ್ಯನವರು ತಮ್ಮ ಕೈಯಿಂದ ಐವತ್ತು ರೂಪಾಯಿಗಳನ್ನು ಠೇವಣಿಯಾಗಿ ತುಂಬಿ ಅರಸು ಅವರ ಗೆಲುವಿಗೆ ಕಾರಣರಾಗಿದ್ದ ಅವರು 'ಕಿಂಗ್ ಮೇಕರ್' ಎಂದು ಪ್ರಸಿದ್ಧರಾದರು. ಈ ಪ್ರಜಾಪ್ರತಿನಿಧಿ ಸಭೆಯಲ್ಲೇ ೨೬ರ ಹರೆಯದ ಯುವಕ ಅರಸು ಅವರೇ ಅತಿ ಚಿಕ್ಕವರಾಗಿದ್ದರು. ೧೯೪೨ ರಲ್ಲಿ ನಡೆದ 'ಚಲೇಜಾವ್ ಚಳವಳಿ'ಯಲ್ಲಿ ಭಾಗವಹಿಸಿದ ಅರಸು, ಮುಂದೆ ೧೯೪೭ ರಲ್ಲಿ ಮೈಸೂರು ಸಂಸ್ಥಾನದಲ್ಲಿ ನಡೆದ 'ಜವಾಬ್ದಾರಿ ಸರಕಾರ'ಕ್ಕಾಗಿ ನಡೆದ [illegible] ಭಾಗವಹಿಸಿದರು.

೧೯೫೨ ರಲ್ಲಿ ಪ್ರಥಮ ಸಾರ್ವಜನಿಕ ಚುನಾವಣೆಯಲ್ಲಿ ಹುಣಸೂರು ಕ್ಷೇತ್ರದಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸಿ, ಗೆಲುವು ಪಡೆದು, ರಾಜ್ಯ ವಿಧಾನಸಭೆಗೆ ಆಯ್ಕೆಯಾಗಿ, ಶಾಸನಸಭೆಯ ಸದಸ್ಯರಾದರು. ೧೯೫೨ ರಿಂದ ತಮ್ಮ ಕೊನೆ ಉಸಿರಿರುವರೆಗೂ ಇದೇ ಕ್ಷೇತ್ರವನ್ನು ಪ್ರತಿನಿಧಿಸಿದರು. ಹುಣಸೂರಿನ ಜನಾನುರಾಗಿ ಶಾಸಕರಾಗಿ ಬೆಳೆಯುತ್ತಿದ್ದ ಅರಸು, ೧೯೫೭ ರಲ್ಲಿ ಬಿ.ಡಿ. ಜತ್ತಿಯವರ ಅಧ್ಯಕ್ಷತೆಯಲ್ಲಿ ನೇಮಿಸಲ್ಪಟ್ಟ ಭೂಸುಧಾರಣಾ ಸಮಿತಿಯ ಸದಸ್ಯರಾಗಿ ಆಯ್ಕೆಯಾದರು. ಮುಂದೆ ಇದೇ ಭೂಸುಧಾರಣಾ ಶಾಸನ ಜಾರಿಗೆ ತರಲು ಸ್ವಲ್ಪಮಟ್ಟಿಗೆ ಅರಸು ಅವರಿಗೆ ಸಹಾಯಕವಾಯಿತು ಎಂದು ಹೇಳಬಹುದು.

೧೯೬೨ರ ಚುನಾವಣೆಯಲ್ಲಿ ಹುಣಸೂರಿನಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸಿ ರಾಜ್ಯ ವಿಧಾನಸಭೆಗೆ ಅವಿರೋಧವಾಗಿ ಆಯ್ಕೆಯಾದರು. ಇದೇ ಚುನಾವಣೆಯಲ್ಲಿ ಎಸ್. ನಿಜಲಿಂಗಪ್ಪನವರ ಕಾಂಗ್ರೆಸ್‌ಗೆ ಹೆಚ್ಚಿನ ಬೆಂಬಲ ದೊರೆತರೂ ಚಿತ್ರದುರ್ಗ ಕ್ಷೇತ್ರದಲ್ಲಿ ಇವರು ಪರಾಭವಗೊಂಡಿದ್ದರು. ಹೀಗಿದ್ದರೂ ಅವರು ತಮ್ಮ ಶಾಸಕರ ಬೆಂಬಲದಿಂದ ಮುಖ್ಯಮಂತ್ರಿಯಾಗುವ ಸಾಧ್ಯತೆಗಳು ಇದ್ದವು. ಇದನ್ನು ಅರಿತ ಅರಸು ಅವರು ಬಲವಾಗಿ ವಿರೋಧಿಸಿ "ಎಸ್. ನಿಜಲಿಂಗಪ್ಪ ಮುಖ್ಯಮಂತ್ರಿಯಾಗ ಬಾರದು" ಎಂದು ದಿಟ್ಟತನದಿಂದ ಹೇಳಿದರು. ಹೀಗಾಗಿ ನಿಜಲಿಂಗಪ್ಪನವರ ರಾಜಕೀಯ ಕಟ್ಟಾಭಿಮಾನಿ ಎಸ್.ಆರ್. ಕಂಠಿಯವರು ಮುಖ್ಯಮಂತ್ರಿಯಾಗಿ ಅಧಿಕಾರವಹಿಸಿಕೊಂಡರು. ಆದರೆ ಬಾಗಲಕೋಟೆಯ ಕ್ಷೇತ್ರದಲ್ಲಿ ನಡೆದ ಉಪಚುನಾವಣೆಯಲ್ಲಿ ಎಸ್. ನಿಜಲಿಂಗಪ್ಪನವರು ಗೆಲ್ಲುವುದರ ಮೂಲಕ ಪುನಃ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡರು. ಈ ಬಾರಿ ಎಸ್. ನಿಜಲಿಂಗಪ್ಪನವರು ಅರಸು ಅವರಿಗೆ ತಮ್ಮ ಮಂತ್ರಿಮಂಡಲದಲ್ಲಿ ಸಾರಿಗೆ, ವಸತಿ, ಪಶುಸಂಗೋಪನೆ, ವಾರ್ತಾ, ಮೀನುಗಾರಿಕೆ, ರೇಷ್ಮೆಯಂಥ ಖಾತೆಗಳನ್ನು ವಹಿಸಿಕೊಟ್ಟಿದ್ದರು. ಇದರಿಂದ ೧೯೬೮ರಲ್ಲಿ ಕೇಂದ್ರ ಸಿಲ್ಕ್‌ಬೋರ್ಡಿನ ಅಧ್ಯಕ್ಷರಾಗಿ ಆಯ್ಕೆಯಾದರು.

೧೯೭೯ ರಲ್ಲಿ ಅರಸು ಅವರಿಗೆ ಪ್ರಬಲ ಜಾತಿಗಳ ಚಕ್ರವ್ಯೂಹ ಬೇಧಿಸುವ ಅವಕಾಶ ಒದಗಿ ಬಂತು. ಕಾರಣ ಕಾಂಗ್ರೆಸ್ ಒಡೆದು ಇಬ್ಭಾಗವಾಯಿತು. ಇದರಿಂದಾಗಿ "ಕಾಂಗ್ರೆಸ್ ಇಂಡಿಕೇಟ್ ಮತ್ತು ಸಿಂಡಿಕೇಟ್"[೧] ಎಂದಾದವು. ಆಗ ಡಾ. ತಿಮ್ಮೆಗೌಡರು ಎಸ್. ನಿಜಲಿಂಗಪ್ಪನವರನ್ನು ಬೆಂಬಲಿಸಿದರೆ, ಅರಸುರವರು ಇಂದಿರಾಗಾಂಧಿಯವರನ್ನು ಬೆಂಬಲಿಸಿದರು. ಆದರೂ ಒಡೆದು ಹೋದ ಎರಡು ಬಣಗಳನ್ನು ಒಂದು ಮಾಡಲು ದೇವರಾಜ ಅರಸು ಅವರು ಪ್ರಾಮಾಣಿಕವಾಗಿ ಪ್ರಯತ್ನಿಸಿದರು. ಆದರೆ ಆಗ ಇದ್ದಂಥ ಜಾತಿ ರಾಜಕಾರಣದ ಪರಿಣಾಮವಾಗಿ ನಿಜಲಿಂಗಪ್ಪನವರು ವೀರೇಂದ್ರಪಾಟೀಲರನ್ನು ಬೆಂಬಲಿಸಿ ಅವರನ್ನು ಮುಖ್ಯಮಂತ್ರಿಯನ್ನಾಗಿ ಮಾಡಿದರು.

೧೯೭೦-೭೧ ರಲ್ಲಿ ಮೈಸೂರು ಪ್ರದೇಶ ಕಾಂಗ್ರೆಸ್ ಕಮಿಟಿ ಅಧ್ಯಕ್ಷತೆಗೆ ಸಂಬಂಧಿಸಿದಂತೆ ಪ್ರಧಾನಿ ಇಂದಿರಾಗಾಂಧಿಯವರ ಸಮ್ಮುಖದಲ್ಲಿ ಮಾತುಕತೆ ನಡೆದ ವೇಳೆಯಲ್ಲಿ "ಅಲ್ಪಸಂಖ್ಯಾತ ಕೋಮಿನವರಾದ ಅರಸು ಅವರನ್ನು ಅಧ್ಯಕ್ಷರನ್ನಾಗಿ ಮಾಡಿದರೆ, ಪಕ್ಷಕ್ಕೆ ಗೆಲುವು ತರಲಾರದು"[೨] ಎಂದು ಕೆಂಗಲ್ ಹನುಮಂತಯ್ಯನವರು ವಾದಿಸಿದರು. ಆಗ ಅರಸು ಅವರು "ನನಗೆ ಮಾತನಾಡುವುದಕ್ಕೆ ಒಂದು ಅವಕಾಶ ಕೊಡಿ" ಎಂದು ಇಂದಿರಾಗಾಂಧಿಯವರನ್ನು ಕೋರಿದರು. ಅವಕಾಶ ದೊರೆಯಿತು. ಆಗ ಅರಸು ಅವರು "ಹೌದು ಮೇಡಂ ಅವರು ಹೇಳುವುದು ನಿಜ, ನಾನು ಮೈನಾರಿಟಿ ಕಮ್ಯೂನಿಟಿಯವ (ಅಲ್ಪಸಂಖ್ಯಾತ), ಇದೇ ಅಳತೆಗೋಲನ್ನೇ ಜನ ನಿಮಗೂ ಅನ್ವಯಿಸಿ, ಅಲ್ಪಸಂಖ್ಯಾತರ ನಾಯಕಿ ಎನ್ನಬಹುದು" ಎಂದು ನುಡಿದರು. ಆದರೂ ಇಂದಿರಾಜಿ ಅರಸರ ಮೇಲಿನ ವಿಶ್ವಾಸದಿಂದ ಮೈಸೂರು ಕಾಂಗ್ರೆಸ್ ಕಮಿಟಿ ಅಧ್ಯಕ್ಷರನ್ನಾಗಿ ನೇಮಿಸಿದರು. ಅಂದಿನಿಂದ ಕರ್ನಾಟಕದ ರಾಜಕೀಯದಲ್ಲಿ ಒಂದು ಹೊಸ ಅಧ್ಯಾಯ ಪ್ರಾರಂಭವಾಯಿತೆಂದೇ ಹೇಳಬೇಕು.

೧೯೭೧ರಲ್ಲಿ ಇಂದಿರಾಗಾಂಧಿ ರಾಜ್ಯಕ್ಕೆ ದೀರ್ಘ ಭೇಟಿ ನೀಡಿದರು. ಅವರ ಬೆಂಬಲಿಗರು ಬಹಳ ಉತ್ಸಾಹದಿಂದ ಅವರನ್ನು ಸ್ವಾಗತಿಸಿದರು. ಈ ವಿಷಯವನ್ನು ಸರ್ಕಾರಕ್ಕೆ ತಿಳಿಸದೇ ಇರುವುದು ಟೀಕೆಗೆ ಒಳಗಾದರೂ ಕಾರ್ಯಕರ್ತರಲ್ಲಿ ಉತ್ಸಾಹವನ್ನು ತುಂಬಿಸಿ ಇದರ ಜೊತೆಗೆ ೧೯೭೧ರ ಚುನಾವಣೆಗೆ ತುಸು ಮೊದಲು ಇಬ್ಬರು ಸಚಿವರು ಇಂದಿರಾ ಕಾಂಗ್ರೆಸ್‌ಗೆ ಬೆಂಬಲ ಸೂಚಿಸಿ, ಆಡಳಿತ ಪಕ್ಷದಿಂದ ಹೊರ ನಡೆದರು. ಹೀಗೆ ಎಸ್. ನಿಜಲಿಂಗಪ್ಪ ಕಾಂಗ್ರೆಸ್ ಮೈತ್ರಿಕೂಟದ ಜೊತೆ ಸೇರಿ ಹೊಂದಾಣಿಕೆ ಅಂತಿಮಗೊಳಿಸಿತು. ಇದರಂತೆ ರಾಜ್ಯದ ೨೭ ಸಂಸತ್ ಸ್ಥಾನಗಳ ಪೈಕಿ ೧೮ ಸ್ಥಾನಗಳಲ್ಲಿ ತಮ್ಮ ಪಕ್ಷ ಸ್ಪರ್ಧಿಸುವುದೆಂದು ತೀರ್ಮಾನವಾಯಿತು. 'ಇಂದಿರಾ ಕಾಂಗ್ರೆಸ್' ಅಂತಿಮವಾಗಿ ಎಲ್ಲಾ ೨೭ ಸ್ಥಾನಗಳಿಗೂ ಸ್ಪರ್ಧಿಸಿತು. ಚುನಾವಣೆ ಪ್ರಚಾರದ ಭರಾಟೆಯು ತೀವ್ರವಾಗಿ ನಡೆಯಿತು. ರಾಜ್ಯದಲ್ಲಿ ಎಸ್. ನಿಜಲಿಂಗಪ್ಪ ಕಾಂಗ್ರೆಸ್ ಚುನಾವಣಾ ಉಸ್ತುವಾರಿಯು ವೀರೇಂದ್ರ ಪಾಟೀಲ್‌ರ ನೇತೃತ್ವದಲ್ಲಿ ನಡೆಯಿತು. ಮೈತ್ರಿಕೂಟ ಅಧಿಕಾರಕ್ಕೆ ಬಂದಲ್ಲಿ ಗಡಿ ಮತ್ತು ನೀರಿನ ಹಂಚಿಕೆಗೆ ಸಂಬಂಧಿಸಿದ ಬೇಡಿಕೆಯನ್ನು ನ್ಯಾಯಯುತವಾಗಿ ಪರಿಹರಿಸುವುದು, ಆಸ್ತಿ ಹಕ್ಕಿನ ಪ್ರತಿಪಾದನೆ ಮತ್ತು ಇಂದಿರಾ ಕಾಂಗ್ರೆಸ್‌ಗಿಂತ ಭಿನ್ನವಾದ ಸುಧಾರಣಾ ಕ್ರಮಗಳನ್ನು ಹಮ್ಮಿಕೊಳ್ಳಲಾಗುವುದೆಂದು ವೀರೇಂದ್ರ ಪಾಟೀಲರು ತಿಳಿಸಿದರು. ಇದಕ್ಕೆದುರಾಗಿ ಇಂದಿರಾ ಕಾಂಗ್ರೆಸ್ ಸಮಾಜದಲ್ಲಿನ ಬಡಜನತೆ, ನಿರುದ್ಯೋಗ ಮತ್ತು ಕಾರ್ಮಿಕರ ಸ್ಥಿತಿಗತಿ ಮತ್ತು ಕೇಂದ್ರದ ಸ್ಥಿರತೆ ಕುರಿತಂತೆ ಹೆಚ್ಚಿನ ಒತ್ತು ನೀಡಿದರು.

ಈ ಚುನಾವಣೆಯ ಫಲಿತಾಂಶ ಪ್ರಕಟವಾಗಿ ಎಲ್ಲ ೨೭ ಸ್ಥಾನಗಳು ಇಂದಿರಾ ಕಾಂಗ್ರೆಸ್‌ಗೆ ಲಭಿಸಿತು. ನಿಜಲಿಂಗಪ್ಪ ಕಾಂಗ್ರೆಸ್‌ನ ಭದ್ರಕೋಟೆಯೆನಿಸಿದ್ದ ರಾಜ್ಯದಲ್ಲಿ ಹೆಸರಿಗೂ ಸಹ ಒಂದೂ ಸ್ಥಾನ ಗಳಿಸದೆ ಸೋಲನುಭವಿಸುವಂತಾಯಿತು. ಈ ಹಿನ್ನೆಲೆಯಲ್ಲಿ ವೀರೇಂದ್ರ ಪಾಟೀಲರು ಸೋಲನ್ನು ಗೌರವಯುತವಾಗಿ ಒಪ್ಪಿಕೊಂಡು ರಾಜೀನಾಮೆ ನೀಡಿದರು. ಈ ಸಂದರ್ಭದಲ್ಲಿ ವ್ಯಾಪಕವಾದ ಪಕ್ಷಾಂತರ ನಡೆಯಿತು ಮತ್ತು ವೀರೇಂದ್ರ ಪಾಟೀಲರ ಪಕ್ಷದ ಆತ್ಮೀಯ ಸದಸ್ಯರೆಲ್ಲರೂ ಅವರಿಂದ ದೂರವಾಗತೊಡಗಿದರು. ವೀರೇಂದ್ರ ಪಾಟೀಲರ ಸರ್ಕಾರ ಪತನಗೊಂಡಾಗ, ಸರ್ಕಾರ ಸ್ಥಾಪಿಸುವ ಬಲ ಇಂದಿರಾ ಕಾಂಗ್ರೆಸ್‌ಗೆ ಮಾತ್ರ ಇದ್ದಿತಾದರೂ ಅದಕ್ಕೆ ಅಡ್ಡಗೋಡೆಯಾದವರು ದೇವರಾಜ ಅರಸುರವರು. ಸರ್ಕಾರ ರಚಿಸುವ ಇಂಥ ಅವಕಾಶವನ್ನು ರಾಜಕೀಯ ಪಕ್ಷವೊಂದು ನಿರಾಕರಿಸಿದ ಘಟನೆ ಜರುಗಿದ್ದು ಅಂದು ಭಾರತದ ಯಾವ ರಾಜ್ಯದಲ್ಲಿಯೂ ನಡೆದಿರಲಿಲ್ಲ. ಅಂದು ಒಂದು ವೇಳೆ ಇಂದಿರಾ ಕಾಂಗ್ರೆಸ್ ಪಕ್ಷ ಸರ್ಕಾರ ರಚಿಸಿದರೆ ವಿರೋಧ ಪಕ್ಷದ ನಾಯಕರಾಗಿದ್ದ ಎಚ್. ಸಿದ್ದವೀರಪ್ಪನವರು ಮುಖ್ಯಮಂತ್ರಿಯಾಗುವ ಎಲ್ಲಾ ಸಾಧ್ಯತೆಗಳು ಇದ್ದವು. ಆಗ ಇಂದಿರಾ ಕಾಂಗ್ರೆಸ್‌ನ ರಾಜ್ಯಸಂಚಾಲಕರಾಗಿದ್ದ ದೇವರಾಜ ಅರಸರು, ವೀರೇಂದ್ರ ಪಾಟೀಲರ ಸರ್ಕಾರದ ಪತನಕ್ಕೆ ಕಾರಣರಾದ ಪಕ್ಷಾಂತರಿಗಳ ಜೊತೆಗೂಡಿ ಸರ್ಕಾರ ರಚಿಸುವುದನ್ನು ವಿರೋಧಿಸಿದರು. ಕಾರಣ ಪಕ್ಷಾಂತರಿಗಳ ಬೆಂಬಲದಿಂದ ರಚಿಸಿದ ಸರ್ಕಾರದಲ್ಲಿ ಹೊಸ ನಾಯಕತ್ವಕ್ಕೆ ಅವಕಾಶ ಇರುವುದಿಲ್ಲ.

ಇದರಿಂದಾಗಿ ಪಕ್ಷ ತನ್ನ ವರ್ಚಸ್ಸನ್ನು ಕಳೆದುಕೊಳ್ಳುವುದು ಮತ್ತು ಸರ್ಕಾರ ರಚಿಸಲು ಸಿದ್ದವೀರಪ್ಪನವರು ತೋರಿದ ಆತುರ ಹಾಗೂ ಎಂ.ವಿ. ಕೃಷ್ಣಪ್ಪರಂತಹ ಒಕ್ಕಲಿಗ ನಾಯಕರು ಬೆಂಬಲಿಸಿದ್ದು, ಅರಸರಿಗೆ ಸರಿಕಾಣಲಿಲ್ಲ. ಮತ್ತೇ ರಾಜ್ಯದ ರಾಜಕೀಯದಲ್ಲಿ ಪ್ರಬಲ ವರ್ಗಗಳಾದ ಲಿಂಗಾಯತ, ಒಕ್ಕಲಿಗರ ಪ್ರಾಬಲ್ಯವೇ ಮುಂದುವರಿಯುವುದು ಅರಸರಿಗೆ ಬೇಡವಾಗಿತ್ತು. ಆದ್ದರಿಂದ ಕೂಡಲೇ ಚುನಾವಣೆ ಎದುರಿಸುವುದೇ ಒಳ್ಳೆಯದು ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಈ ಸಂದರ್ಭದಲ್ಲಿ ಅರಸು ಉದ್ದೇಶಿಸಿದರೆ ಅರಸು ಮುಖ್ಯಮಂತ್ರಿಯಾಗಬಹುದಿತ್ತು. ಆದರೆ ಆಗ ಅವರಿಗಿನ್ನು ಸಿದ್ದವೀರಪ್ಪನವರಿಗಿದ್ದ ರಾಜಕೀಯ ವ್ಯಕ್ತಿತ್ವ ಇರಲಿಲ್ಲ. ಹೀಗಾಗಿ ಇಂದಿರಾ ಕಾಂಗ್ರೆಸ್ ಸರ್ಕಾರ ರಚಿಸುವುದಿಲ್ಲ ಎಂದು ಅಂತಿಮ ತೀರ್ಮಾನವಾದ ಮೇಲೆ ವಿಧಾನಸಭೆಗೆ ಚುನಾವಣೆ ನಡೆದೇ ಹೊಸ ಸರ್ಕಾರ ರಚನೆಯಾಗ ಬೇಕೆಂದಾಯಿತು. ಪರಿಣಾಮವಾಗಿ ಇದೇ ಸಂದರ್ಭದಲ್ಲಿ ಸಮಾಜವಾದಿ ಪಕ್ಷದ ಶಾಂತವೇರಿ ಗೋಪಾಲಗೌಡರು ನಿಜಲಿಂಗಪ್ಪ ಕಾಂಗ್ರೆಸ್ ಸದಸ್ಯರ ಬೆಂಬಲದೊಂದಿಗೆ ಸರ್ಕಾರ ರಚಿಸಲು ಆಸಕ್ತಿ ತೋರಿದರು. ಹೀಗೆ ಪ್ರಯತ್ನಗಳು ಮುಂದುವರಿಯುತ್ತಿದ್ದ ಹಾಗೆಯೇ ಈ ಮಧ್ಯೆ ಇಂದಿರಾ ಕಾಂಗ್ರೆಸ್ ಹೈಕಮಾಂಡ್ ಪಕ್ಷದ ರಾಜ್ಯ ಘಟಕಕ್ಕೆ ಮಂತ್ರಿಮಂಡಲ ರಚಿಸದಂತೆ ಸ್ಪಷ್ಟ ನಿರ್ದೇಶನ ನೀಡಿತು. ಇದರಿಂದಾಗಿ ಅತಂತ್ರ ಸ್ಥಿತಿ ಉಂಟಾಗಿ ೧೯೭೧ರಲ್ಲಿ ಪ್ರಥಮ ಬಾರಿಗೆ ರಾಜ್ಯದಲ್ಲಿ ರಾಷ್ಟ್ರಪತಿ ಆಡಳಿತ ಜಾರಿ ಗೊಳಿಸಲಾಯಿತು.

ಹೀಗಾಗಿ ೧೯೭೨ರ ಫೆಬ್ರವರಿ ತಿಂಗಳ ಕೊನೆಯ ವಾರದಲ್ಲಿ ಕರ್ನಾಟಕ ವಿಧಾನಸಭೆಗೆ ಚುನಾವಣೆ ನಡೆದು, ಮಾರ್ಚ್ ಮೊದಲ ವಾರದಲ್ಲಿ ಫಲಿತಾಂಶ ಹೊರಬಿದ್ದಿತು. ಕರ್ನಾಟಕ ರಾಜಕಾರಣದ ಇತಿಹಾಸದಲ್ಲೇ ಹಿಂದೆಂದೂ ಕಂಡರಿಯದಂಥ ಬಿರುಸಿನ ಚುನಾವಣೆ ಇದಾಗಿತ್ತು. ಅಂದಿನವರೆಗೆ ಕಾಂಗ್ರೆಸ್ ರಾಜಕೀಯದಲ್ಲಿ ೨೨೬ ಸದಸ್ಯರ ವಿಧಾನಸಭೆ ಚುನಾವಣೆಗೆ ನಿಲ್ಲಿಸುವ ಅಭ್ಯರ್ಥಿಗಳ ಪಟ್ಟಿಯಲ್ಲಿ ಸುಮಾರು ೧೫೦ ಸ್ಥಾನಗಳು ಲಿಂಗಾಯತ, ಒಕ್ಕಲಿಗ, ಬ್ರಾಹ್ಮಣರ ಕೋಮಿಗೆ ಸೇರಿದವರಾಗಿರುತ್ತಿದ್ದರು. ಉಳಿದ ೭೬ ಸ್ಥಾನಗಳಲ್ಲಿ ೨೬ ಸ್ಥಾನಗಳಿಗೆ ಪರಿಶಿಷ್ಟ ಜನಾಂಗದವರು, ಕೇವಲ ಆರೇಳು ಜನ ಮತೀಯ ಅಲ್ಪಸಂಖ್ಯಾತರಾಗಿರುತ್ತಿದ್ದರು. ಆದರೆ ಈ ೧೯೭೨ರ ಚುನಾವಣೆಯಲ್ಲಿ ಅಖಿಲ ಭಾರತ ಕಾಂಗ್ರೆಸ್ ನಾಯಕತ್ವವು ಈ ನಿಟ್ಟಿನಲ್ಲಿ ಲೆಕ್ಕಾಚಾರ ಹಾಕುತ್ತಾ ಹಿಂದಿನ ಮಾದರಿಗಿಂತ ತುಸು ಭಿನ್ನವಾದ ವಿಧಾನವನ್ನು ಅನುಸರಿಸುವ ಅಪಾಯದ ಜವಾಬ್ದಾರಿಯನ್ನು ಪಾಲಿಸಿತು. ಅಂದರೆ ಹಿಂದುಳಿದ ವರ್ಗ, ದುರ್ಬಲರಿಗೆ, ಅಲ್ಪಸಂಖ್ಯಾತರಿಗೆ, ಮಹಿಳೆಯರಿಗೆ ಮತ್ತು ಯುವಕರಿಗೆ ರಾಜಕೀಯ ಹಕ್ಕಿನ ನೆಲೆಯನ್ನು ನಿರ್ಮಿಸಲು ಪ್ರಯತ್ನಿಸಿದರು. ಈ ವರ್ಷದ ಚುನಾವಣೆಯಲ್ಲಿ ಇಂದಿರಾ ಕಾಂಗ್ರೆಸ್‌ನ ಅಭ್ಯರ್ಥಿಗಳ ಪಟ್ಟಿಯಲ್ಲಿ ೧೬೬ ಸ್ಥಾನಗಳಲ್ಲಿ ಪರಿಶಿಷ್ಟ, ಹಿಂದುಳಿದ, ಅಲ್ಪಸಂಖ್ಯಾತರು, ಉಳಿದ ೬೦ ಸ್ಥಾನಗಳಲ್ಲಿ ಬ್ರಾಹ್ಮಣ, ವೀರಶೈವ, ಒಕ್ಕಲಿಗರಿಗೆ ಟಿಕೇಟ್ ಹಂಚುವ ಮೂಲಕ ಅರಸರು ರಾಜ್ಯದಲ್ಲಿನ ಅಧಿಕಾರ ರಚನೆಯಲ್ಲಿ ಪರಿವರ್ತನೆ ತರುವಲ್ಲಿ ಯಶಸ್ವಿಯಾದರು. ಇದರ ಪ್ರತಿಫಲವೇ ರಾಜ್ಯದಲ್ಲಿ ಇಂದಿರಾ ಕಾಂಗ್ರೆಸ್

ಹೆಚ್ಚು ಸ್ಥಾನಗಳನ್ನು ಗಳಿಸಿದ್ದು. ಅಂದರೆ ೧೬೫ ಸ್ಥಾನಗಳನ್ನು ಪಡೆಯಿತು. ಈ ಪೈಕಿ ಶೇ. ೯೦ಕ್ಕೂ ಹೆಚ್ಚಿನ ಅವಕಾಶ ದೊರೆತು ಹಿಂದುಳಿದ, ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ನಾಯಕರೇ ರಾಜ್ಯ ವಿಧಾನಸಭೆಗೆ ಆಯ್ಕೆ ಯಾಗಿದ್ದರು. ಅಂದಿನವರೆಗೆ ರಾಜ್ಯ ವಿಧಾನಸಭೆಯಲ್ಲಿ ಕೇವಲ ಬೆರಕೆಯ ವಸ್ತುಗಳಾಗಿದ್ದ ಹಿಂದುಳಿದ ವರ್ಗಗಳ ನಾಯಕರು ಆ ವರ್ಷ ರಾಜಕೀಯವಾಗಿ ಎದ್ದು ಕಂಡುಬಂದರು.[೬] ಇದು ದೇವರಾಜ ಅರಸರ ರಾಜಕೀಯ ದೂರದೃಷ್ಟಿಯ ಆಲೋಚನೆಯ ಪ್ರತಿಫಲ ಎಂದರೆ ತಪ್ಪಾಗಲಾರದು.

ಅರಸುರವರ ರಾಜಕೀಯ ವ್ಯಕ್ತಿತ್ವದಲ್ಲಿ ನಾವು ಪರಸ್ಪರ ವಿರುದ್ಧವಾದ ಎರಡು ಮುಖಗಳನ್ನು ಕಾಣುತ್ತೇವೆ. ಆದರೆ ಈ ಮುಖಗಳು ಎಷ್ಟು ನಿಖರವಾದವು ಎಂದು ಈಗಲೇ ಹೇಳುವುದು ಕಷ್ಟ. ಕಾರಣ ಒಂದೆಡೆ ಪ್ರಗತಿಪರ ಮತ್ತು ಅಭಿವೃದ್ಧಿಶೀಲ ಕಾರ್ಯಾಚಾರಣೆಯನ್ನು ಕಂಡರೆ ಮತ್ತೊಂದೆಡೆ ಅನುಕೂಲಸಿಂಧು ಮತ್ತೆ ಕೆಲವು ವೇಳೆ ಸಮಯಸಾಧಕ ಪ್ರವೃತ್ತಿಯನ್ನು ಕಾಣುತ್ತೇವೆ. ಬಹುಶಃ ಅರಸುರವರು ೧೯೭೭ ರಲ್ಲೇ ಹೊಸ ರಾಜಕಾರಣದ ಶಕ್ತಿಯ ಬೆಳವಣಿಗೆಯನ್ನು ಕಾಣಲಾರಂಭಿಸಿದರು. ಈ ಶಕ್ತಿಯ ಬೆಳವಣಿಗೆಗಾಗಿ ಅವರು ಕ್ರಮ ಕೈಗೊಂಡಿದ್ದು ಅಧಿಕಾರದ ಗದ್ದುಗೆಗೆ ಏರಿದ ನಂತರವೆ. ಇಲ್ಲಿ ವಿಶೇಷವಾಗಿ ಹರಿಜನ ಮತ್ತು ಹಿಂದುಳಿದ, ಅಲ್ಪಸಂಖ್ಯಾತರನ್ನು ಸಂಘಟಿಸಲು ಪ್ರಯತ್ನಿಸಿದರು. ಅವರ ಕಲ್ಯಾಣಕ್ಕಾಗಿ ಹಲವಾರು ಕಾರ್ಯಕ್ರಮಗಳನ್ನು ಕೈಗೊಂಡರು. ಈ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಅಗತ್ಯವಾಗಿದ್ದ ಅಧಿಕಾರ ಸ್ಥಾನಗಳ ಮಾರ್ಪಾಟನ್ನು ಮನಗಂಡರು.

ಅರಸು ಅವರು ಹಿಂದುಳಿದ ವರ್ಗದವರನ್ನು ಆಯಕಟ್ಟಿನ ಜಾಗಗಳಿಗೆ ತರುವ ಜಾಣ್ಮೆ ತೋರಿದರು. ಪ್ರಗತಿ ಪರವಾದ ಕಾರ್ಯಕ್ರಮಗಳ ಜಾರಿಗೆ ತರುವಲ್ಲಿ ಮೇಲ್ವರ್ಗದವರು ಒಡ್ಡುತ್ತಿದ್ದ ಅಡಚಣೆಗಳನ್ನು ನಿವಾರಿಸಿದರು. ಅಷ್ಟಕ್ಕೂ ಸಮಾಧಾನ ಪಡದೆ ಎಲ್ಲಾ ಮುಖ್ಯ ಇಲಾಖೆಗೆ ಸೇರಿದ ಅಧಿಕಾರೇತರ ಅಧ್ಯಕ್ಷರನ್ನು ನೇಮಿಸಿದರು. ಅಲ್ಲದೆ ಅಧಿಕಾರಿಗಳು, ಅಧಿಕಾರೇತರ ಅಧೀನರಾಗಿ ಕಾರ್ಯ ನಿರ್ವಹಿಸುವಂತೆ ಮಾಡಿದರು. ಈ ಒಂದು ಕ್ರಮ ಅರಸರ ರಾಜಕಾರಣದ ಮುತ್ಸದ್ಧಿತನಕ್ಕೆ ನಿದರ್ಶನವಾಗಿದೆ. ಏಕೆಂದರೆ ಅಧಿಕಾರೇತರ ಅಧ್ಯಕ್ಷರುಗಳಲ್ಲಿ ಬಹುಪಾಲು ಜನರು ರಾಜಕೀಯವಾಗಿ ಅಸಂತುಷ್ಟಗೊಂಡಿದ್ದ ಭಿನ್ನಮತೀಯರಾಗಿದ್ದರಿಂದ ಇವರು ಅರಸರ ಮುಖ್ಯಮಂತ್ರಿ ಸ್ಥಾನಕ್ಕೆ ಸಂಚಕಾರ ತರಬಲ್ಲವರಾಗಿದ್ದ ಶಾಸಕರಾಗಿದ್ದರು. ಇದರಿಂದಾಗಿ ಅಧ್ಯಕ್ಷರು ಅಸಂತುಷ್ಟ ಹೊಂದಿ ತಾತ್ಕಾಲಿಕವಾಗಿ ಯಾದರೂ ನಿಷ್ಕ್ರೀಯರಾಗುತ್ತಾರೆಂಬ ಭಾವನೆ ಅರಸು ಅವರದಾಗಿತ್ತು. ಈ ನೇಮಕದಿಂದಾಗಿ ಪಕ್ಷ ದೊಳಗಿನ ತಮ್ಮ ವಿರೋಧಿಗಳನ್ನು ತಣ್ಣಗಾಗಿಸಿದರು. ಅನೇಕ ವೇಳೆ ಅವರಿಗೆ ಆಮಿಷ ತೋರಿಸಿ ವಿರೋಧಿ ಪಕ್ಷವೆಂಬುದೊಂದು ರಾಜ್ಯದಲ್ಲಿ ಇದೆಯೇ ಎನ್ನುವ ಅನುಮಾನ ಬರುವ ರೀತಿಯಲ್ಲಿ ರಾಜಕೀಯ ವಿರೋಧಿಗಳನ್ನೆಲ್ಲ ತಮ್ಮ ಕಡೆಗೆ ಸೆಳೆದುಕೊಂಡರು. ಹೀಗೆ ಅಧಿಕಾರವನ್ನು ಸಾವಕಾಶವಾಗಿ ಗಟ್ಟಿಪಡಿಸಿಕೊಳ್ಳುತ್ತಲೇ, ಜನಸಾಮಾನ್ಯರಲ್ಲಿ ಜಾಗೃತಿಯನ್ನುಂಟು ಮಾಡಲು ಕ್ರಮ ಕೈಗೊಂಡದ್ದು

ಅರಸರ ವೈಶಿಷ್ಟ್ಯವಾಗಿದೆ. ಈ ಸಂದರ್ಭದಲ್ಲಿ ಭೂಸುಧಾರಣೆ ಮತ್ತು ಹಿಂದುಳಿದ, ಅಲ್ಪಸಂಖ್ಯಾತರ ಮತ್ತು ದಲಿತರಿಗೆ ಕೊಟ್ಟ ಅನೇಕ ರೀತಿಯ ವಿಶೇಷ ಸವಲತ್ತು, ಯೋಜನಾ ಕಾರ್ಯಕ್ರಮಗಳು ಬಹುಮುಖ್ಯವಾದವು.

೧೯೭೨ರ ಚುನಾವಣೆಯ ಫಲಿತಾಂಶದಲ್ಲಿ ರಾಜಕೀಯ ಹೊಸತನವನ್ನು ಎಲ್ಲರೂ ಕಂಡಿದ್ದರು. ದೇವರಾಜ ಅರಸರ ಬಗ್ಗೆ ಮೊದಲಿನಿಂದಲೂ ತಮಗಿದ್ದ ಅಸಡ್ಡೆಯನ್ನು ಬಿಡಲೊಲ್ಲದ ಕೆಲವರು, ಪತ್ರಕರ್ತರೂ ಕೂಡ "ಈ ಸಲ ಅರಸು ಒಳ್ಳೆ ತಂತ್ರ ಮಾಡಿದ್ದಾನೆ. ರಾಜಕೀಯವಾಗಿ ಲಿಂಗಾಯತರ ಬೆನ್ನುಮೂಳೆ ಮುರಿದಿದ್ದಾನೆ" ಎನ್ನುವ ಮಾತುಗಳನ್ನಾಡಿದರು.

ಚುನಾವಣೆಯಲ್ಲಿ ದೊಡ್ಡ ಬಹುಮತ ಗಳಿಸಿದ ಇಂದಿರಾ ಕಾಂಗ್ರೆಸ್‌ನಲ್ಲಿ ಮುಂದಿನ ಮುಖ್ಯಮಂತ್ರಿ ಸ್ಥಾನಕ್ಕೆ ಯಾರನ್ನು ಆಯ್ಕೆ ಮಾಡುವುದು? ಎಂಬುದು ಕೆಲದಿನದ ಮಟ್ಟಿಗೆ ಕುತುಹಲ ಪ್ರಶ್ನೆಯಾಯಿತು. "ದೇವರಾಜ ಅರಸರೆ ಮುಖ್ಯಮಂತ್ರಿಯಾಗುತ್ತಾರೆ" ಎನ್ನುವ ಬಿ.ಟಿ. ಸೋಮಣ್ಣನ ಮಾತಿಗೆ ಬೆಲೆ ಕೊಡಲು ಪತ್ರಕರ್ತರಲ್ಲಿ ಬಹುಮಂದಿ ಸಿದ್ಧರಿರಲಿಲ್ಲ. ರಾಜಕೀಯವಾಗಿ ಬಹಳ ಪ್ರಭಾವಿ ಕೋಮು ಎನಿಸಿಕೊಂಡಿದ್ದ ಲಿಂಗಾಯತರನ್ನು ಇನ್ನಷ್ಟು ದೂರವಿಡಲು ಇಂದಿರಾಗಾಂಧಿ ಒಬ್ಬ ಒಕ್ಕಲಿಗ ನಾಯಕ ನನ್ನು ಮುಖ್ಯಮಂತ್ರಿಯಾಗಿ ಮಾಡಬಹುದೆಂಬ ಮಾತಿಗೂ ಚಾಲನೆ ಸಿಕ್ಕಿತು. ವಿಧಾನಸಭೆಯ ಸದಸ್ಯರಲ್ಲದ ಅರಸರನ್ನು ಆಯ್ಕೆ ಮಾಡುವರೆಂಬ ನಿರೀಕ್ಷೆ ಅಷ್ಟೇನು ಪ್ರಕಟವಾಗಲಿಲ್ಲ.

ಮುಂದೆ ಇಂದಿರಾ ಕಾಂಗ್ರೆಸ್ ಶಾಸಕಾಂಗ ಪಕ್ಷದ ನಾಯಕನ ಆಯ್ಕೆಗೆ ಸಭೆ ಸೇರಿದ ದಿನ ಪ್ರಧಾನಿ ಇಂದಿರಾಗಾಂಧಿ ಬಾಂಗ್ಲಾ ದೇಶದ ಪ್ರವಾಸದಲ್ಲಿದ್ದರು. ಮುಂದಿನ ಮುಖ್ಯಮಂತ್ರಿಯ ಆಯ್ಕೆ ಇಂದಿರಾ ಕಾಂಗ್ರೆಸಿನ ಶಾಸಕಾಂಗ ಪಕ್ಷಕ್ಕೆ ಅಷ್ಟೇನೂ ಸುಲಭದ ಕೆಲಸವಾಗಿರಲಿಲ್ಲ. ಅಂದು ವಿಧಾನಸೌಧದ ಮೂರನೆ ಮಹಡಿಯಲ್ಲಿ ಶಾಸಕಾಂಗದ ಸಭೆ ಸೇರಿ ಸುಮಾರು ಮೂರು ಗಂಟೆ ಕಳೆದರೂ ಯಾವುದೇ ತೀರ್ಮಾನವಾಗಲಿಲ್ಲ, ನಾಯಕಿ ಇಂದಿರಾಗಾಂಧಿ ಹೇಳಿದವರೇ ನಾಯಕರಾಗಬೇಕೆಂಬ ಒಮ್ಮತಕ್ಕೆ ಬರಲಾಯಿತು. ಆಮೇಲೆ ಬಾಂಗ್ಲಾ ಪ್ರವಾಸದಲ್ಲಿದ್ದ ಇಂದಿರಾಗಾಂಧಿಯವರನ್ನು ಸಂಪರ್ಕಿಸುವ ಪ್ರಯತ್ನ ಶುರುವಾಯಿತು. ಸಂಜೆ ಟೆಲಿಫೋನಿನಲ್ಲಿ ಸಂಪರ್ಕಿಸಿದಾಗ ಅವರು ನಾಯಕ ಸ್ಥಾನಕ್ಕೆ ದೇವರಾಜ ಅರಸರ ಹೆಸರನ್ನು ಸೂಚಿಸಿದರಂತೆ. ಮಹಾನಾಯಕಿಯ ಈ ಸಂದೇಶ ಸಿಕ್ಕಿದ ಎರಡೇ ನಿಮಿಷಗಳಲ್ಲಿ ಅರಸು ಆಯ್ಕೆಯ ಪ್ರಕ್ರಿಯೆ ಪೂರ್ಣಗೊಂಡಿತು. ಹೀಗಾಗಿ ರಾಜ್ಯದ ಇತಿಹಾಸದಲ್ಲಿ ಮೊದಲ ಬಾರಿಗೆ ಜಾತಿಮೂಲದ ರಾಜಕೀಯ ಪ್ರಭುತ್ವವನ್ನು ಮುರಿದ ಅರಸರು ರಾಜ್ಯ ವಿಧಾನಸಭೆಯಲ್ಲಿ ಕಾಂಗ್ರೆಸ್ ಪಕ್ಷದ ನಾಯಕರಾಗಿ ದಿನಾಂಕ ೨೦.೩.೧೯೭೨ರಂದು ಕರ್ನಾಟಕ ರಾಜ್ಯದ ಎಂಟನೆಯ ಮುಖ್ಯಮಂತ್ರಿಯಾಗಿ ಆಯ್ಕೆಯಾದರು. ಇಲ್ಲಿಂದಲೇ ಕರ್ನಾಟಕದ ರಾಜಕಾರಣ ಒಂದು ಹೊಸ ತಿರುವು ಪಡೆದುಕೊಂಡಿತು ಎಂಬುದರಲ್ಲಿ ಎರಡು ಮಾತಿಲ್ಲ.

ಮುಖ್ಯಮಂತ್ರಿಯಾಗಿ ದೇವರಾಜ ಅರಸರು ರಚಿಸಿದ ಸಂಪುಟವೂ ಕೂಡ ಹೊಸತನಕ್ಕೆ ಸಮರ್ಥನೆ ನೀಡಿರಲಿಲ್ಲ ಎನ್ನುವ ಗುಮಾನಿ ಒಂದಿದೆ. ಕಾರಣ ಈ ರಾಜ್ಯದಲ್ಲಿ ಅಧಿಕಾರ ನಡೆಸುವುದು ತಮ್ಮ ಜನ್ಮಸಿದ್ಧ ಹಕ್ಕೆಂದು ನಂಬಿದ ಹಳೆಯ ಪ್ರಬಲ ನಾಯಕರು ಸಂಪುಟದಲ್ಲಿ ಅನೇಕರಿದ್ದರು. ಸಾಮಾಜಿಕ ವ್ಯವಸ್ಥೆಯಲ್ಲಿ ಪರಿವರ್ತನೆಯನ್ನು ಸಹಿಸಲಾರದ ಜನರೆನಿಸಿದ್ದ ಸಿದ್ದವೀರಪ್ಪ, ಎಚ್.ಎಂ. ಚನ್ನಬಸಪ್ಪ, ಕೆ.ಎಚ್. ಪಾಟೀಲ್, ಎನ್. ಹುಚ್ಚುಮಾಸ್ತಿಗೌಡ ಮೊದಲಾದವರಿದ್ದರು. ಹಿಂದುಳಿದ ವರ್ಗದ ರಾಜಕೀಯ ಮುಖಂಡರಿಗೆ ಅಸಮಾಧಾನ ತಂದಿತು. ಆದರೂ ಅವರೊಂದಿಗೆ ಹೊಸತನದ ಅಲೆಯನ್ನೇರಿ ಬಂದ ಹುಬ್ಬಳ್ಳಿಯ ಡಿ.ಕೆ. ನಾಯ್ಕರ್ (ಕುರುಬ), ಗುಲ್ಬರ್ಗಾದ ದೇವೇಂದ್ರಪ್ಪ ಘುಳಪ್ಪ (ಅಂಬಿಗ), ಬೆಳಗಾವಿಯ ಆರ್.ಡಿ. ಕಿತೂರ್ (ಚಮ್ಮಾರ್) ಮೊದಲಾದವರು ಅರಸು ಸಂಪುಟದಲ್ಲಿ ಸ್ಥಾನ ಪಡೆದರು. ಇದನ್ನು ಈ ಹಿಂದುಳಿದ ವರ್ಗದ ರಾಜಕೀಯ ಮುಖಂಡರು ಮನಗಾಣದೆ ಹೋದದ್ದು ಸೋಜಿಗದ ಸಂಗತಿಯಾಗಿದೆ. ಅದೇನೇ ಇದ್ದರೂ ಸಂಪುಟದಲ್ಲಿ ಈ 'ಮೂವರ ಸೇರಿಕೆ ಉತ್ತರ ಕರ್ನಾಟಕ ಭಾಗದಲ್ಲಿ ವೀರಶೈವರ ಪ್ರಭುತ್ವದ ಪತನವೆಂದು ಪರಿಗಣಿಸಲಾಗಿತ್ತು.'[೫] ಹೊಸದಾಗಿ ಮಂತ್ರಿಯಾಗಿದ್ದ ಹುರುಪಿನಲ್ಲಿ ದೇವೇಂದ್ರಪ್ಪ ಘುಳಪ್ಪನವರು "ಈಗ ವೀರೇಂದ್ರರ ಕಾಲ ಹೋಗಿದೆ. ದೇವೇಂದ್ರರ ಕಾಲ ಬಂದಿದೆ"[೬] ಎಂದು ಸಾರ್ವಜನಿಕ ಸಭೆಯೊಂದರಲ್ಲಿ ಬಹಿರಂಗವಾಗಿ ಹೇಳಿಕೆ ನೀಡಿದರು.

ಅರಸು ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡ ಮೇಲೆ ಹಲವಾರು ಸುಧಾರಣಾ ಕ್ರಮಗಳನ್ನು ಜಾರಿಗೆ ತಂದರು. ಇದು ಅರಸು ಅವರ ಸ್ಥಾನಮಾನವನ್ನು ಇನ್ನಷ್ಟು ಉನ್ನತ ಮಟ್ಟಕ್ಕೇರುವಂತೆ ಮಾಡಿತು. ಹಿಂದುಳಿದ, ದಲಿತ, ಅಲ್ಪಸಂಖ್ಯಾತರ ವರ್ಗಗಳ ನೇತಾರರನ್ನಾಗಿಸಿತು. ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳಿಗೆ ಒಂದು ಸ್ಥಾನಮಾನವನ್ನು ಕಲ್ಪಿಸಿಕೊಡಲು ೮ ಆಗಸ್ಟ್ ೧೯೭೨ ರಲ್ಲಿ ಎಲ್.ಜಿ. ಹಾವನೂರ್‌ರವರ ನೇತೃತ್ವದಲ್ಲಿ ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗವನ್ನು ನೇಮಿಸಿದರು. ಈ ಆಯೋಗವು ೧೯೭೫ ರಲ್ಲಿ ತನ್ನ ವರದಿಯನ್ನು ಸಲ್ಲಿಸಿತು. ಈ ವರದಿಯು ಲಿಂಗಾಯತ, ಒಕ್ಕಲಿಗ, ಬಂಟರು ಮತ್ತು ಬ್ರಾಹ್ಮಣರನ್ನು ಹಿಂದುಳಿದ ವರ್ಗಗಳ ಗುಂಪಿನಿಂದ ತೆಗೆದು ಇವುಗಳಿಗೆ ಮೀಸಲಾತಿ ಸೌಲಭ್ಯಗಳನ್ನು ನಿಲ್ಲಿಸಲಾಯಿತು. ಇದರಿಂದಾಗಿ ಈ ಆಯೋಗದ ವರದಿಯು ಹಿಂದುಳಿದ ವರ್ಗಗಗಳಲ್ಲಿನ ಪ್ರಜ್ಞೆಯನ್ನು ಹೆಚ್ಚಿಸಿತು. ಪರಿಷ್ಕೃತ ವರದಿಯು ಮುಸ್ಲಿಮರನ್ನು ಸಹ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿಸಿತು. ಆರ್ಥಿಕವಾಗಿ ದುರ್ಬಲರಾದವರನ್ನು ಜಾತಿ ನೆಲೆಯಲ್ಲಿ ಪರಿಗಣಿಸದೆ ಇವರನ್ನು ಹಿಂದುಳಿದ ವಿಶೇಷ ವರ್ಗವೆಂದು ನಮೂದಿಸುವ ಹೊಸ ಸರ್ಕಾರಿ ಆದೇಶವನ್ನು ಜಾರಿಗೆ ತರಲಾಯಿತು.

ಭೂಸುಧಾರಣೆ ಮಸೂದೆ ಅಥವಾ ೧೯೭೪ರ ಭೂಸುಧಾರಣಾ ಕಾಯ್ದೆಯು ದೇವರಾಜ ಅರಸು ಸರ್ಕಾರದ ಮತ್ತೊಂದು ಮಹತ್ವದ ಸುಧಾರಣೆಯಾಗಿದೆ. ಇದು "ಉಳುವವನೆ ಹೊಲದೊಡೆಯ" ಎಂಬ ಘೋಷಣೆಯೊಂದಿಗೆ ಭೂರಹಿತರಿಗೆ ಭೂಮಿಯನ್ನು ಹೊಂದುವಂತೆ ಮಾಡಿತು.[೭] ಈ ಬಗೆಗಿನ

ಪ್ರಯತ್ನ ಈ ಮೊದಲೆ ಪ್ರಾರಂಭವಾಗಿತ್ತಾದರೂ ಗೇಣಿದಾರರ ಪರವಾಗಿ ಭೂಸುಧಾರಣೆಯನ್ನು ಜಾರಿಗೆ ತರಲು ಬೇಕಾದ ರಾಜಕೀಯ ಇಚ್ಛಾಶಕ್ತಿಯನ್ನು ಯಾರು ಪ್ರದರ್ಶಿಸಿರಲಿಲ್ಲ (ಕಡಿದಾಳ ಮಂಜಪ್ಪನವರನ್ನು ಹೊರತುಪಡಿಸಿ).

ಚುನಾವಣಾ ಪ್ರಚಾರದ ಸಮಯದಲ್ಲಿ ನೀಡಿದ ವಾಗ್ದಾನವನ್ನು ಈಡೇರಿಸಲು ಅರಸು ಬದ್ಧರಾಗಿದ್ದರು. ಆದರೆ ಈ ಕಾಯಿದೆಯಿಂದಾಗಿ ರಾಜ್ಯದ ಹಲವು ಮೂಲೆಗಳಲ್ಲಿ ಅಪಸ್ವರವೆದ್ದು, ದೇವರಾಜ ಅರಸರು ಮುಖ್ಯವಾಗಿ ಪ್ರಬಲ ಮೇಲ್ಜಾತಿಯ ಜನರ ಕೆಂಗಣ್ಣಿಗೆ ಗುರಿಯಾಗಬೇಕಾಯಿತು. ಹಾಗೆಯೇ ಜೀತಮುಕ್ತಿ ಕಾಯ್ದೆ, ಋಣ ಪರಿಹಾರ, ಸಾಲಸುಧಾರಣೆ ಮತ್ತು ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ವಿಶೇಷ ಸವಲತ್ತುಗಳನ್ನು ದೊರಕಿಸುವ ಯೋಜನೆಗಳನ್ನು ಜಾರಿಗೆ ತಂದರು.

ಭೂಸುಧಾರಣೆಗೆ ಮತ್ತೊಂದು ಸಂಬಂಧಿಸಿದ ವ್ಯಾಜ್ಯ, ತಕರಾರುಗಳ ತನಿಖೆ ನಡೆಸಲು ಸಿವಿಲ್ ನ್ಯಾಯಾಲಯಗಳ ಬದಲಿಗೆ ಪ್ರತಿ ತಾಲೂಕುಗಳಲ್ಲಿ ವಿಶೆಷ ಭೂ ನ್ಯಾಯಮಂಡಳಿಯನ್ನು ನೇಮಿಸಿ ಅವುಗಳ ಮೂಲಕ ವ್ಯಾಜ್ಯದ ವಿಲೇವಾರಿಗೆ ಒತ್ತು ನೀಡಲಾಯಿತು. ಈ ನ್ಯಾಯ ಮಂಡಳಿಗಳಲ್ಲಿ ಪರಿಶಿಷ್ಟ ಜಾತಿ ವರ್ಗಗಳ ಸದಸ್ಯರು ಇರುವಂತೆ ನೋಡಿಕೊಳ್ಳಲಾಯಿತು. ಜೇಮ್ಸ್ ಮೇನರ್‌ರರವರು ದೇವರಾಜ ಅರಸರ ಕಾಲದ ಮೈಸೂರು ಆಡಳಿತವನ್ನು ವಿವರಿಸುತ್ತಾ 'ದೇವರಾಜ ಅರಸರು ವಿಭಜನೆ ಸಂದರ್ಭದಲ್ಲಿ ಇಂದಿರಾಗಾಂಧಿ ಬೆಂಬಲಿಗರಾಗಿದ್ದು, ಚಾಣಾಕ್ಷ ರಾಜಕಾರಣಿಗಳಾಗಿದ್ದರು. ಇಂದಿರಾಗಾಂಧಿ ರಾಜಕಾರಣದ ಸೂರೆ ಪದ್ಧತಿಯ ಫಲಾನುಭವಿಗಳಾಗಿ ಸ್ವಾತಂತ್ರ್ಯನಂತರದ ಮೈಸೂರು ರಾಜಕಾರಣದಲ್ಲಿನ ೨೫ ವರ್ಷಗಳ ಲಿಂಗಾಯತ ಮತ್ತು ಒಕ್ಕಲಿಗರ ಪ್ರಾಬಲ್ಯದ ನಂತರ ಮುಖ್ಯಮಂತ್ರಿಯಾದರು. ಈ ಮೂಲಕ ಎರಡು ಗುಂಪುಗಳ ರಾಜಕೀಯ ಹಿಡಿತವನ್ನು ಸಡಿಲಿಸುವ ಮಹತ್ಕಾರ್ಯದೊಂದಿಗೆ ರಾಜ್ಯದ ಜನಸಂಖ್ಯೆಯಲ್ಲಿ ಶೇ.೬೦ ರಷ್ಟಿರುವ ಅಧಿಕಾರ ವಂಚಿತ ಗುಂಪುಗಳಿಗೆ ಪ್ರಾಧಾನ್ಯತೆ ನೀಡಿದರು. ೧೯೭೩ ರಲ್ಲಿ ಮೈಸೂರು ರಾಜ್ಯಕ್ಕೆ 'ಕರ್ನಾಟಕ'ವೆಂದು ನಾಮಕರಣ ಮಾಡಿ ಅತ್ಯಂತ ಜಟಿಲವು ಆಗಿದ್ದ, ಈ ಭಾವನಾತ್ಮಕ ಸಮಸ್ಯೆಯನ್ನು ಜಾಣ್ಮೆಯಿಂದ ಪರಿಹರಿಸಿ ರಾಜಕೀಯ ಮುತ್ಸದ್ದಿ ಎನಿಸಿಕೊಂಡರು. ಈ ಒಂದು ಪ್ರಕರಣದಿಂದ ಅವರ ವರ್ಚಸ್ಸು ಮತ್ತಷ್ಟು ಹೆಚ್ಚಿಸಿತು' ಎಂದು ಅಭಿಪ್ರಾಯಪಟ್ಟಿದ್ದಾರೆ.

೧೯೭೭-೭೮ ರಲ್ಲಿ ಭಾರತದ ರಾಜಕಾರಣದಲ್ಲಿ ದೊಡ್ಡಮಟ್ಟದ ಬದಲಾವಣೆಗಳು ನಡೆದವು. ತುರ್ತು ಪರಿಸ್ಥಿತಿಯನ್ನು ರದ್ದುಗೊಳಿಸಿದ ನಂತರ ನಡೆದ ಚುನಾವಣೆಯಲ್ಲಿ ಕೇಂದ್ರದಲ್ಲಿ ಜನತಾಪಕ್ಷವು ಅಧಿಕಾರಕ್ಕೆ ಬಂದಿತು. ಕಾಂಗ್ರೆಸ್ಸೇತರ ಸರ್ಕಾರವು ಕೇಂದ್ರದಲ್ಲಿ ಪ್ರಥಮ ಬಾರಿಗೆ ಜಾರಿಗೆ ಬಂದದ್ದು, ರಾಷ್ಟ್ರದ ರಾಜಕಾರಣದ ಇತಿಹಾಸದಲ್ಲಿಯೇ ಮೊಟ್ಟಮೊದಲನೆಯದು. ಕರ್ನಾಟಕದಲ್ಲಿ ಇದು ಬದಲಾವಣೆಯನ್ನು ತರದಿದ್ದರೂ ಇತರ ರಾಜ್ಯಗಳಲ್ಲಿ ಜನತಾ ಅಲೆಯು ತೀವ್ರವಾಗಿ ಪರಿಣಾಮ ಬೀರಿತು. ೧೯೭೭ರ ಚುನಾವಣೆಯಲ್ಲಿ ಹೀನಾಯ ಸೋಲನ್ನು ಅನುಭವಿಸಿ, ಆರೋಪಗಳ ಕಟಕಟೆಯಲ್ಲಿ

ನಿಂತಿದ್ದ (ಇಂದಿರಾಗಾಂಧಿಯ ಪುತ್ರ ಸಂಜಯಗಾಂಧಿ ಕೂಡ ಸೋತಿದ್ದರು) ಇಂದಿರಾಗಾಂಧಿಯವರನ್ನು ಚಿಕ್ಕಮಗಳೂರು ಕ್ಷೇತ್ರದ ಉಪಚುನಾವಣೆಯಲ್ಲಿ ನಿಲ್ಲಿಸಿ ಗೆಲ್ಲಿಸಿ ಅವರಿಗೆ ರಾಜಕೀಯ ಮರುಜನ್ಮ ನೀಡಿದ್ದು ಸಾಮಾನ್ಯ ಸಂಗತಿಯೇನಲ್ಲ.

ಇದರಿಂದಾಗಿ ದೇವರಾಜ ಅರಸರು ರಾಜಕೀಯವಾಗಿ ಬಹಳಷ್ಟು ಪ್ರಬಲರಾಗತೊಡಗಿದರು. ಎಲ್ಲಿ ಹೋದಲ್ಲಿಯೂ ಅವರನ್ನು ಹೊಗಳುವ ಜನರ ಹಿಂಡೇ ಹುಟ್ಟಿಕೊಂಡಿತು. ರಾಷ್ಟ್ರಮಟ್ಟದಲ್ಲಿಯೂ ಅರಸರನ್ನು ಗುಣಗಾನ ಮಾಡುವವರ ಸಂಖ್ಯೆ ಹೆಚ್ಚಿತು. ಅಂದಿನವರೆಗೆ ಅವರನ್ನು ಖಂಡಿಸುತ್ತಿದ್ದ ರಾಷ್ಟ್ರಮಟ್ಟದ ಪತ್ರಿಕೆಗಳು ಈಗ ಅವರನ್ನು ಧೀಮಂತ ರಾಜಕಾರಣಿಯೆಂದು ವರ್ಣಿಸಲಾರಂಭಿಸಿದವು. ೧೯೭೭ರ ಚುನಾವಣೆಯಲ್ಲಿ ಇಂದಿರಾಗಾಂಧಿಯವರ ಸೋಲಿನ ನೆರಳಲ್ಲಿ ಅಧಿಕಾರದ ಗದ್ದುಗೆಗೇರಿದ್ದ ಕೆಲವರು ಜನತಾ ನಾಯಕರು ಅರಸರ ಬಗ್ಗೆ ತಮಗಿದ್ದ ತಪ್ಪು ತಿಳುವಳಿಕೆಯನ್ನು ತಿದ್ದಿಕೊಳ್ಳುವ ಧಾಟಿಯಲ್ಲಿ ಮಾತನಾಡಲಾರಂಭಿಸಿದರು. ಇಂಥ ಜನತಾ ನಾಯಕರುಗಳಲ್ಲಿ ಆಗ ಕೇಂದ್ರದ ಉದ್ಯಮ ಮಂತ್ರಿಯಾಗಿದ್ದ ಜಾರ್ಜ್ ಫರ್ನಾಂಡಿಸ್ ಕೂಡ ಒಬ್ಬರು.

೧೯೭೮ ರಲ್ಲಿ ಆರನೆಯ ವಿಧಾನಸಭಾ ಚುನಾವಣೆಯು ನಡೆಯಿತು. ದೇವರಾಜ ಅರಸರು ರಾಜ್ಯದಲ್ಲಿ ಕಾಂಗ್ರೆಸ್ಸಿನ ಚುನಾವಣೆಯ ಪಾರುಪತ್ಯ ವಹಿಸಿದರು. ಇದರಲ್ಲಿ ವಿಧಾನಸಭೆ ಸ್ಥಾನಗಳ ಸಂಖ್ಯೆಯನ್ನು ೨೨೪ಕ್ಕೆ ಏರಿಸಲಾಯಿತು. ಈ ಚುನಾವಣೆಯಲ್ಲಿ ಅರಸು ಅವರು ಮತ್ತೇ ಹುಣಸೂರು ಕ್ಷೇತ್ರದಿಂದ ಸ್ಪರ್ಧಿಸಿದರು. ಆ ಕ್ಷೇತ್ರದಲ್ಲಿ ಅವರಿಗೆ ಸಮೀಪದವರಾಗಿದ್ದ ಟಿ. ತಿಮ್ಮೇಗೌಡರನ್ನೇ ಅರಸರ ಪ್ರತಿಸ್ಪರ್ಧಿಯನ್ನಾಗಿ ಮಾಡಿದರು. ಆಗ ಎಲ್ಲಾ ಒಕ್ಕಲಿಗರು ತಿಮ್ಮೇಗೌಡರನ್ನೇ ಬೆಂಬಲಿಸಿದರು. ಈ ಸಂದರ್ಭದಲ್ಲಿ ಅರಸರ ಜೊತೆಗಿದ್ದವರು ಹುಣಸೂರು ತಾಲೂಕು ಬೋರ್ಡಿನ ಸದಸ್ಯರಾಗಿದ್ದ ಟಿ. ಕರಿಯಪ್ಪಗೌಡರು ಎಂಬುವವರು ಮಾತ್ರ ಅರಸರನ್ನು ಬೆಂಬಲಿಸಿದರು. ಈ ಚುನಾವಣೆಯಲ್ಲಿ ಅರಸರು ಹೆಚ್ಚು ಬಹುಮತದಿಂದ ಗೆದ್ದು ಬಂದರು. ಆದರೂ ದೇವರಾಜ ಅರಸರು ತಿಮ್ಮೇಗೌಡರನ್ನು ಶತ್ರುವೆಂದು ಪರಿಗಣಿಸಲಿಲ್ಲ. ಅವರ ಮೇಲೆ ಎಂದಿಗೂ ತಮ್ಮ ರಾಜಕೀಯ ವೈರತ್ವ ಸಾಧಿಸಲಿಲ್ಲ. ಆದುದರಿಂದಲೇ "ರಾಜಕೀಯ ಜೀವನದಲ್ಲಿ ಯಾರೂ ಖಾಯಂ ಮಿತ್ರರಲ್ಲ, ಯಾರೂ ಖಾಯಂ ಶತ್ರುಗಳಲ್ಲ"[೩] ಎನ್ನುವ ಮಾತನ್ನು ಅರಸರು ಆಗಾಗ ಹೇಳುತ್ತಿದ್ದುಂಟು. ಇದರಿಂದಾಗಿಯೇ ಅರಸು ಅವರಿಗೆ ಮೊದಲು ಪರಮಶತ್ರುಗಳಾಗಿದ್ದವರು ಅನಂತರದಲ್ಲಿ ಮಿತ್ರರಾದರು. ಇದು ಅವರ ವ್ಯಕ್ತಿತ್ವದ ಅತ್ಯುನ್ನತ ವಿಶೇಷ ಗುಣ ಎನ್ನಬಹುದು. ಇದು ಇಂದು ರಾಜಕೀಯ ವೈರತ್ವವನ್ನೇ ಸಾಧಿಸುತ್ತಿರುವ ಇಂದಿನ ರಾಜಕಾರಣಿಗಳಿಗೆ ಒಂದು ಮಾದರಿಯಾಗಬೇಕು. ಒಟ್ಟು ೨೨೪ ಸ್ಥಾನಗಳ ಪೈಕಿ ಇಂದಿರಾ ಕಾಂಗ್ರೆಸ್ ೨೧೪ ಸ್ಥಾನಗಳಲ್ಲಿ ಸ್ಪರ್ಧಿಸಿ ೧೪೯ ಸ್ಥಾನಗಳಲ್ಲಿ ಜಯ ಗಳಿಸಿತು. ಹೀಗಾಗಿ ಶೇಕಡ ೪೪.೨೫ ರಷ್ಟು ಮತಗಳನ್ನು ಪಡೆಯಿತು. ಇಂದಿರಾ ಕಾಂಗ್ರೆಸ್‌ನಿಂದ ಸ್ಪರ್ಧಿಸಿದ ೬ ಜನ ಮಹಿಳೆಯರು ವಿಧಾನಸಭೆಗೆ ಆಯ್ಕೆಗೊಂಡರು. ಕಾಂಗ್ರೆಸ್‌ಗೆ ಪ್ರಬಲ ಸ್ಪರ್ಧಿಯಾದ 'ಜನತಾ ಪಕ್ಷ'ವು ೨೨೨ ಸ್ಥಾನಗಳಲ್ಲಿ ಸ್ಪರ್ಧಿಸಿ ೧೫೯ ಸ್ಥಾನಗಳನ್ನು ಪಡೆಯುವ ಮೂಲಕ ಶೇ. ೩೭.೯೫ರಷ್ಟು

ಮತಗಳನ್ನು ಪಡೆಯಿತು. ಪಕ್ಷೇತರರು ೧೦ ಸ್ಥಾನಗಳನ್ನು ಪಡೆದರು. ಸಂಸ್ಥಾ ಕಾಂಗ್ರೆಸ್ ೨೧೨ ಸ್ಥಾನಗಳಲ್ಲಿ ಸ್ಪರ್ಧಿಸಿ ಕೇವಲ ೨ ಸ್ಥಾನಗಳಿಸಿ ರಾಜ್ಯದಲ್ಲಿ ಹೀನಾಯ ಸೋಲನ್ನು ಕಂಡಿತು. ಈ ಚುನಾವಣೆಯಲ್ಲಿ ಇಂದಿರಾ ಕಾಂಗ್ರೆಸ್ ೧೧೭ ಹಿಂದುಳಿದ ಜಾತಿ ವರ್ಗಗಳ ಅಭ್ಯರ್ಥಿಗಳಿಗೆ ಟಿಕೆಟ್ ನೀಡಿತ್ತು. ಲಿಂಗಾಯತ ಮತ್ತು ಒಕ್ಕಲಿಗರಿಗೆ ೭೨ ಟಿಕೇಟುಗಳನ್ನು ನೀಡಿದ್ದು ಈ ಚುನಾವಣೆಯ ವಿಶೇಷವಾಗಿತ್ತು. ಈ ಕಾರ್ಯ ಸಾಧನೆಯು ರಾಜ್ಯದಲ್ಲಿ ಇಂದಿರಾ ಮತ್ತು ಅರಸರ ಪ್ರಭಾವವನ್ನು ಮತದಾರರು ನಿರೂಪಿಸಿದರು. ಹೀಗಾಗಿ ೧೯೮೨ ರಲ್ಲಿ ದೇವರಾಜ ಅರಸರು ಶಾಸಕಾಂಗ ಪಕ್ಷದ ನಾಯಕರಾಗಿ ಎರಡನೆಯ ಬಾರಿಗೆ ರಾಜ್ಯದ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡರು.

ಅರಸು ಅವರ ನೇತೃತ್ವದಲ್ಲಿ ೧೯೭೮ರ ಚುನಾವಣೆಯಲ್ಲಿ ಜಯಗಳಿಸಿದರೂ ೧೯೭೯ರಲ್ಲಿ ಆಡಳಿತ ಕಾಂಗ್ರೆಸ್ ಪಕ್ಷದಲ್ಲಿನ ಕೆಲ ಬೆಳವಣಿಗೆಯಿಂದ ಅನಿರೀಕ್ಷಿತವಾಗಿ ರಾಜ್ಯದಲ್ಲೂ ಕಾಂಗ್ರೆಸ್ ಪಕ್ಷ ವಿಭಜನೆಯಾಗುವಂತಾಯಿತು. ದೇವರಾಜ ಅರಸರು ಮತ್ತು ಕೆ.ಎಚ್. ಪಾಟೀಲರ ನಡುವೆ ರಾಜಕೀಯ ಭಿನ್ನಾಭಿಪ್ರಾಯಗಳು ಉಂಟಾದವು. ಈ ಕುರಿತಂತೆ ಸಮಾಲೋಚನೆಗಳು ನಡೆದು ರಾಜಿಸೂತ್ರ ನಡೆದರೂ ಅದು ಫಲಿಸಲಿಲ್ಲ. ಸದಾ ಸಂಚು-ವಂಚನೆಗಳ ಸುಳಿಯ ರಾಜಕಾರಣ "ಅಧಿಕಾರಕ್ಕಾಗಿ ಯಾರನ್ನೂ ಯಾರು ಬಲಿತೆಗೆದುಕೊಳ್ಳುವ ಆರೂಢವೆ ರಾಜಕೀಯ"[೯] ಎಂದೆಲ್ಲ ರಾಜಕೀಯದ ಬಗ್ಗೆ ವ್ಯಾಖ್ಯಾನ ನೀಡುತ್ತಿದ್ದ ಅರಸರು, ಅವರೇ ಅಂಥ ರಾಜಕೀಯಕ್ಕೆ ಬಲಿಪಶುವಾದದ್ದು ಇತಿಹಾಸದ ಒಂದು ವ್ಯಂಗ್ಯ ಎಂದು ಹೇಳಬಹುದು. ಕಾಂಗ್ರೆಸ್ ಪಕ್ಷ ಸದಾ ತನ್ನ ಕಪಿಮುಷ್ಠಿಯಲ್ಲೇ ಇರಬೇಕೆಂದು ಬಯಸಿದ್ದ ಇಂದಿರಾಗಾಂಧಿ ಈ ಕಾರಣದಿಂದಲೇ ಪಕ್ಷದೊಳಗೆ ಯಾರು ಪ್ರಬಲರಾಗಿ ಬೆಳೆಯದಂತೆ ಎಚ್ಚರ ವಹಿಸಿದರು. ಅದುವರೆಗೂ ಇಂದಿರಾ ಇಚ್ಛೆಯಂತೆ ನಡೆದುಕೊಂಡಿದ್ದ ಅರಸರು ಚಿಕ್ಕಮಗಳೂರು ಚುನಾವಣೆಯ ನಂತರ ಇಂದಿರಾಗಾಂಧಿಯವರ ಕಪಿಮುಷ್ಠಿಯಿಂದ ಹೊರಬರಲು ಮಾಡಿದ ಪ್ರಯತ್ನ ಒಂದು ವಿಶ್ವಾಸದ್ರೋಹದಂತೆ ಇಂದಿರಾ ಅವರಿಗೆ ಕಂಡಿರಬೇಕು. ಜೊತೆಗೆ ಕಾಂಗ್ರೆಸ್ ಪಕ್ಷದ ಎಲ್ಲಾ ರಾಜಕೀಯ ವ್ಯವಹಾರಗಳಲ್ಲಿ ತನ್ನ ಪ್ರಭಾವ ಬೀರಿದ್ದ ಸಂಜಯ್‌ಗಾಂಧಿಯ ಕಾರ್ಯವೈಖರಿಯನ್ನು ಅರಸು ಬಲವಾಗಿ ವಿರೋಧಿಸಿದರು. ಅದೂವರೆಗೂ ಯಾವವೊಬ್ಬ ಕಾಂಗ್ರೆಸ್ ಮುಖಂಡನಿಂದ ಪ್ರತಿಭಟಿಸಲಾಗಿರಲಿಲ್ಲ. ಕಾರಣ ತಾವು ಎಲ್ಲಿ ಇಂದಿರಾಗಾಂಧಿ ಅವರ ಅವಕೃಪೆಗೆ ಒಳಗಾಗುತ್ತೇವೆಂಬ ಭಯ. ಹೀಗಾಗಿ ಯಾರು ಸಹ ಅವರನ್ನು ಎದುರು ಹಾಕಿಕೊಳ್ಳಲಿಲ್ಲ. ಮೊತ್ತ ಮೊದಲ ಬಾರಿಗೆ ಸಂಜಯಗಾಂಧಿಯವರ ಚಟುವಟಿಕೆಗಳನ್ನು ವಿರೋಧಿಸಿದ ಕೀರ್ತಿ ಅರಸು ಅವರಿಗೆ ಸಲ್ಲುತ್ತದೆ. ದೆಹಲಿಯಲ್ಲಿ ಕಾಂಗ್ರೆಸ್ ಪಕ್ಷದ ಸಮಾವೇಶದಲ್ಲಿ ತಾರಕೇಶ್ವರಿ ಸಿನ್ಹಾ ಅವರ ಸಮ್ಮುಖ ದಲ್ಲಿ ಅರಸು ಅವರು ಸಂಜಯಗಾಂಧಿಯವರಿಂದ ಹಿರಿಯ ಕಾಂಗ್ರೆಸ್ ನಾಯಕರುಗಳಿಗೆ ಆಗುತ್ತಿರುವ ಅವಮಾನವನ್ನು ಬಹಿರಂಗವಾಗಿ ಪ್ರತಿಭಟಿಸಿದರು. ಇದರಿಂದ ಸಹಜವಾಗಿಯೇ ಅಂದಿನಿಂದ ಇಂದಿರಾ ಮತ್ತು ದೇವರಾಜ ಅರಸು ಅವರ ನಡುವಿನ ಸಂಬಂಧದಲ್ಲಿ ಬಿರುಕು ಕಾಣತೊಡಗಿತು. ಈ ಎಲ್ಲಾ ಬೆಳವಣಿಗೆಯನ್ನು ಗಮನಿಸಿಯೇ ಅರಸರ ಸಹೋದ್ಯೋಗಿ ಅಜೀಜ್ ಸೇಠ್‌ರವರು ರಾಷ್ಟ್ರಮಟ್ಟದಲ್ಲಿ ಕಾಂಗ್ರೆಸ್ ವಿಭಜನೆಯಾಗುವ ಸಂಕೇತವನ್ನು ಸೂಚಿಸುತ್ತಿದೆಯೆಂಬ ಹೇಳಿಕೆ ನೀಡಿದರು. ಕಾಂಗ್ರೆಸ್

ಅಧ್ಯಕ್ಷ ಹಾಗೂ ಪಾಟೀಲರ ಆಪ್ತ ಗೆಳೆಯರಾದ ಕಾಸು ಬ್ರಹ್ಮಾನಂದ ರೆಡ್ಡಿಯವರು ಅಜೀಜ್‌ಸೇಠ್‌ರನ್ನು ಸಂಪುಟದಿಂದ ಕೈಬಿಡುವಂತೆ ಅರಸರಿಗೆ ಆದೇಶಿಸಿದರು. ಅಲ್ಲದೆ ಸಂಜಯಗಾಂಧಿಯ ಹಿಂಬಾಲಕರಾದ ಎಫ್.ಎಮ್. ಖಾನ್, ಜಾಫರ್ ಷರೀಫ್ ಮತ್ತು ಗುಂಡುರಾಯರು ಅರಸು ಜನತಾ ಪಕ್ಷದೊಂದಿಗೆ ಹೊಂದಾಣಿಕೆಗೆ ಹವಣಿಸುತ್ತಿದ್ದಾರೆಂದು ಆರೋಪಿಸಿದರು. ಹಿಂದುಳಿದ ವರ್ಗಗಳು ಮತ್ತು ವಿವಿಧ ಬಣಗಳನ್ನು ಕಾಂಗ್ರೆಸ್‌ನ ಅಡಿಯಲ್ಲಿ ಒಗ್ಗೂಡಿಸುವುದರ ಮೂಲಕ ಅರಸು ಅವರು ರಾಜ್ಯದಲ್ಲಿ ತನ್ನ ಪಕ್ಷದ ಅಸ್ತಿತ್ವಕ್ಕೆ ಮುಳುಗು ನೀರು ತರಬಹುದೆಂದು ಇಂದಿರಾ ಅನುಮಾನಿಸಿದರು. ಅರಸು ಅವರು ಭ್ರಷ್ಟಾಚಾರದಲ್ಲಿ ತೊಡಗಿಸಿದ್ದಾರೆಂದು ಸಹ ಹೇಳಲಾಯಿತು. ಇಂದಿರಾಗಾಂಧಿಯವರು ಅರಸು ಅವರನ್ನು ಕೆಪಿಸಿಸಿ ಅಧ್ಯಕ್ಷತೆಯಿಂದ ಕೆಳಗಿಳಿಸಿ ಬಂಗಾರಪ್ಪನವರನ್ನು ತಾತ್ಕಾಲಿಕ ಅಧ್ಯಕ್ಷರೆಂದು ನೇಮಿಸಿದರು. ಅರಸರು ಇದನ್ನು ತಿರಸ್ಕರಿಸಿದ ಹಿನ್ನೆಲೆಯಲ್ಲಿ ಪಕ್ಷ ವಿರೋಧಿ ಚಟುವಟಿಕೆಗಳಿಗಾಗಿ ಅವರನ್ನು ಕಾಂಗ್ರೆಸ್ಸಿನ ಪ್ರಾಥಮಿಕ ಸದಸ್ಯತ್ವದಿಂದ ಡಿಸೆಂಬರ್ ೨೬, ೧೯೭೮ ರಂದು ಕಾಂಗ್ರೆಸ್ ನಾಯಕಿ ಇಂದಿರಾಗಾಂಧಿಯವರು ಪಕ್ಷದಿಂದ ಅಮಾನತುಗೊಳಿಸಿದರು.

ಅಲ್ಲಿಯವರೆಗೂ ಇಂದಿರಾಗಾಂಧಿಯ ನಿಷ್ಠಾವಂತ ಅನುಯಾಯಿ ಎಂದು ಕರೆಸಿಕೊಂಡಿದ್ದ, ಅರಸು ವ್ಯಕ್ತಿಪ್ರಜ್ಞೆಯನ್ನು ಮತ್ತು ವಂಶಪಾರಂಪರ್ಯ ರಾಜಕೀಯವನ್ನು ಧಿಕ್ಕರಿಸಿ ಅವರ ವಿರುದ್ಧ ಹೋರಾಡಲು ಪಣತೊಟ್ಟರು. ಆದರೆ ಅವರ ಜೊತೆಗೂಡಿ ಹೋರಾಡಬೇಕಾಗಿದ್ದ ರಾಜಕೀಯವಾಗಿ ಅವರೇ ಬೆಳೆಸಿದಂತಹ ರಾಜ್ಯಮಟ್ಟದ ಉಳಿದ ನಾಯಕರಾರು ಅವರನ್ನು ಬೆಂಬಲಿಸದೇ ಇದ್ದದ್ದು ಅರಸು ರಾಜಕೀಯ ಜೀವನದ ಒಂದು ದುರಂತವಾಗಿ ಪರಿಣಮಿಸಿತು. ತಮ್ಮ ನಿಷ್ಠೆಯನ್ನು ಬದಲಿಸಿದ ಈ ನಾಯಕರುಗಳು ತಮ್ಮ ರಾಜಕೀಯ ಉಳಿವಿಗಾಗಿ ಸಂಜಯಗಾಂಧಿ ಬ್ರಿಗೇಡನ್ನು ಸೇರಿಕೊಂಡು ತಮಗೆ ರಾಜಕೀಯ ಆಶ್ರಯ ನೀಡಿದ ಗುರುವಿನ ವಿರುದ್ಧವೇ ಪಿತೂರಿ ಮಾಡತೊಡಗಿದರು. ಇದರಿಂದಾಗಿ ಬಹುಶಃ ಇಲ್ಲಿಂದಲೇ ದೇವರಾಜ ಅರಸರ ರಾಜಕೀಯ ಜೀವನ ಅವಸಾನದ ಕಡೆಗೆ ಸಾಗಿತು ಎಂದು ಹೇಳಬಹುದು.

### ೩.೧. 'ಕರ್ನಾಟಕ ಕಾಂಗ್ರೆಸ್ ಪಕ್ಷ' ಸ್ಥಾಪಕರಾಗಿ ಅರಸು

೧೯೭೮ ರಲ್ಲಿ ಇಂದಿರಾ ಕಾಂಗ್ರೆಸ್ ಪಾಳೆಯದಿಂದ ಅರಸು ಅವರು ಉಚ್ಚಾಟನೆಯಾಗಿದ್ದರೂ "ಕರ್ನಾಟಕ ಕಾಂಗ್ರೆಸ್ ಪಕ್ಷ"ದ ಹೆಸರಿನಿಂದ ಅಧಿಕಾರದಲ್ಲಿ ಮುಂದುವರಿದರು. ಅದೇ ವರ್ಷ ಜೂನ್ ೨೫ರಂದು ಇಂದಿರಾ ನಿಷ್ಠುರರ ಹಾಗೂ ಅರಸು ಬೆಂಬಲಿಗರ ನಡುವೆ ಬಹುಮತ ಸಾಬೀತು ಪಡಿಸುವ ಪರೀಕ್ಷೆ ನಡೆಯಿತು. ಅಂದಿನ ಬಲಪರೀಕ್ಷೆಯಲ್ಲಿ ಅರಸರ ಸಂಘಟನಾ ಶಕ್ತಿ ಪ್ರದರ್ಶನವಾಯಿತು. ೧೫೫ ಕಾಂಗ್ರೆಸ್ ವಿಧಾನಸಭಾ ಸದಸ್ಯರಲ್ಲಿ ೧೩೧ ಸದಸ್ಯರು ಅರಸರಿಗೆ ಬೆಂಬಲ ಸೂಚಿಸಿದರು. ೮ ಜನ ಸದಸ್ಯರು ಪೋನಿನ ಮುಖಾಂತರ ಬೆಂಬಲ ಸೂಚಿಸಿದರು. ಮತ್ತು ೧೮ ಜನ ಲೋಕಸಭಾ ಸದಸ್ಯರು ದೇವರಾಜ ಅರಸು ಅವರಿಗೆ ತಮ್ಮ ಬೆಂಬಲವನ್ನು ವ್ಯಕ್ತಪಡಿಸಿದರು. ಅದುವರೆಗೂ ಅರಸು ಅವರಿಗೆ ನಿಷ್ಠುರರಾಗಿದ್ದ ಗುಂಡುರಾವ್, ಬಂಗಾರಪ್ಪ ಅವರುಗಳು ಇಂದಿರಾಗಾಂಧಿ ಪಾಳೆಯಕ್ಕೆ

ಸೇರಿದರು. ಬಂಗಾರಪ್ಪ ಇಂದಿರಾ ಕಾಂಗ್ರೆಸಿನ ಅಡ್‌ಹಾಕ್ ಸಮಿತಿಯ ಅಧ್ಯಕ್ಷರೂ ಆದರು. ಇಂದಿರಾ ಕೂಟದಿಂದ ಹೊರಬಿದ್ದ ಅರಸರು "ಕರ್ನಾಟಕ ಕಾಂಗ್ರೆಸ್" ಎಂಬ ಹೊಸ ಪಕ್ಷವನ್ನು ಕಟ್ಟಿದರು.

## ೩.೨. ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಾಗಿ ಅರಸು

೧೯೭೯ ಸೆಪ್ಟೆಂಬರ್ ೧೨, ೧೩ ರಂದು ಬೆಂಗಳೂರು ಲಾಲ್‌ಬಾಗ್ ಗಾಜಿನ ಮನೆಯಲ್ಲಿ ವಿಭಜಿತ ರಾಷ್ಟ್ರೀಯ ಕಾಂಗ್ರೆಸ್‌ನ ಅಧಿವೇಶನ ನಡೆಯಿತು. ಅಂದು ಸರ್ದಾರ ಸ್ವರಣ್‌ಸಿಂಗ್ ತಮ್ಮ ಅಧ್ಯಕ್ಷ ಸ್ಥಾನವನ್ನು ದೇವರಾಜ ಅರಸರಿಗೆ ವಹಿಸಿಕೊಟ್ಟರು. ಅಧ್ಯಕ್ಷ ಸ್ಥಾನದಲ್ಲಿ ಅರಸು ಅವರು ಮಾಡಿದ ಭಾಷಣ ಅವರ ಹೊಸ ಚಿಂತನಾಕ್ರಮವನ್ನು ಪ್ರತಿಬಿಂಬಿಸುವಂತಿತ್ತು. ಕಾಂಗ್ರೆಸ್ ಪಕ್ಷದ ಶ್ರೀಮಂತರು ಹಾಗೂ ಬಡವರನ್ನು ಸಮಾನವಾಗಿ ಓಲೈಸುವ ಸಿದ್ಧಾಂತವನ್ನು ಟೀಕಿಸುತ್ತಾ, ಇದು "ಕುರಿ ಮತ್ತು ತೋಳ" ಎರಡರ ಮೇಲೆಯೂ ಸಮಾನವಾಗಿ ಕೈ ಇಡುವ ಆಟ ಎಂದು ವಿವರಿಸಿದರು. ತಮ್ಮ ಪಕ್ಷ ಬಡಜನರು ಹಾಗೂ ದಲಿತರ ಪರವಾಗಿ ನಿಲ್ಲಬೇಕಾದ ಅಗತ್ಯವನ್ನು ಒತ್ತಿ ಹೇಳಿದರು. ಜಾತಿ ಮತಗಳನ್ನು ಮೀರಿ ವರ್ಗ ಸಮರವನ್ನು ಸಾರುವ ಮೂಲಕ ಒಂದು ರಾಷ್ಟ್ರೀಯ ಪರ್ಯಾಯ ಪಕ್ಷವನ್ನು ಕಟ್ಟುವ ನಿಟ್ಟಿನಲ್ಲಿ ಕಾರ್ಯೋನ್ಮುಖವಾಗುವ ಅಭಿಲಾಷೆಯನ್ನು ಅವರು ವ್ಯಕ್ತಪಡಿಸಿದರು. ೧೯೭೯ರ ಅಕ್ಟೋಬರ್‌ನ ರಾಜ್ಯ ಶಾಸನಸಭೆಯ ಅಧಿವೇಶನದಲ್ಲಿ ಇತ್ತೀಚಿನವರೆಗೂ ತಮ್ಮ ನಿಷ್ಠಾವಂತ ಬೆಂಬಲಿಗರಾಗಿದ್ದವರಿಂದಲೇ ಅರಸು ಸರ್ಕಾರದ ವಿರುದ್ಧ ಅವಿಶ್ವಾಸ ನಿರ್ಣಯ ಮಂಡನೆ ಯಾಯಿತು. ಆ ಸಮಯದಲ್ಲಿ ಅರಸು ಬೆಂಬಲಿಗರಲ್ಲಿ ಕೆಲವರು ಇಂದಿರಾಗಾಂಧಿಯವರ ಬಣ ಸೇರಿದರು. ತಮ್ಮ ಭದ್ರತೆಗಾಗಿ ಅರಸು ಜನತಾ ಪಕ್ಷದಿಂದ ಕೆಲವರನ್ನು ಸೆಳೆದರು. ಪಕ್ಷಾಂತರ, ಭ್ರಷ್ಟಾಚಾರ, ನಂಬಿಕೆಗೆ ದ್ರೋಹ ಮುಂತಾದ ಕೆಟ್ಟ ರಾಜಕೀಯ ಪ್ರಕ್ರಿಯೆಗಳೆಲ್ಲ ಅನಾವರಣಗೊಳ್ಳ ತೊಡಗಿದವು. ಕ್ರಾಂತಿಯ ಮಾತನಾಡುತ್ತಿದ್ದ ಅರಸು ಅವರು ಈ ಸುಳಿಯಲ್ಲಿ ಸಿಕ್ಕಿಬಿದ್ದರು.

ಅರಸು ನಾಯಕತ್ವದ ಕರ್ನಾಟಕ ಕಾಂಗ್ರೆಸ್ ಪಕ್ಷ ಅಧಿಕಾರದಲ್ಲಿದ್ದುದು ಕೆಲವೇ ದಿನಗಳು ಮಾತ್ರ. ೧೯೮೦ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಜನರ ಒಲವು ಇಂದಿರಾ ಕಾಂಗ್ರೆಸ್ ಕಡೆ ಬಲವಾಗಿತ್ತು. ಇಂದಿರಾ ಕಾಂಗ್ರೆಸ್ ರಾಜ್ಯದಲ್ಲಿನ ೨೮ ಸ್ಥಾನಗಳ ಪೈಕಿ ೨೭ರಲ್ಲಿ ಜಯಗಳಿಸಿತು. ಅರಸುರವರ ಕರ್ನಾಟಕ ಕಾಂಗ್ರೆಸ್ ಪಕ್ಷವು ಒಂದೆ ಒಂದು ಸ್ಥಾನ ಪಡೆಯಲು ಸಹ ಸಾಧ್ಯವಾಗಲಿಲ್ಲ. ಅರಸು ಕಾಂಗ್ರೆಸ್ ನಾಯಕರಾದ ಬಿ.ಎ. ಪೈ, ಕೃಷ್ಣಪ್ಪ ಮತ್ತಿತರು ತಮ್ಮ ಠೇವಣಿಯನ್ನು ಕಳೆದು ಕೊಳ್ಳುವಂತಾಯಿತು.

ಲೋಕಸಭಾ ಚುನಾವಣೆಯ ಸೋಲಿನ ಹಿನ್ನೆಲೆಯಲ್ಲಿ ಅರಸು ಅವರು ಫಲಿತಾಂಶ ಪ್ರಕಟವಾದ ಕೆಲವೇ ಗಂಟೆಗಳಲ್ಲಿ ತಮ್ಮ ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಆ ಮೂಲಕ ಪ್ರಜಾಪ್ರಭುತ್ವದಲ್ಲಿದ್ದ ತಮ್ಮ ನಂಬಿಕೆಯನ್ನು ಸಾಬೀತುಪಡಿಸಿದರು. ತುರ್ತು ಪರಿಸ್ಥಿತಿಯ ಕಾಲದಲ್ಲಿ ಮತ್ತು ತಾವು ಹೀನಾಯವಾಗಿ ಸೋಲನ್ನು ಅನುಭವಿಸಿದಾಗ, ಈ ಎರಡು ಸಂದರ್ಭದಲ್ಲಿ ನಡೆದು

ಕೊಂಡ ರೀತಿಯಿಂದಲೇ ಅವರ ವ್ಯಕ್ತಿತ್ವದ ಅರಿವು ನಮಗಾಗುತ್ತದೆ. ಚಿಕ್ಕಂದಿನಿಂದಲೂ ಹೋರಾಟದ ಕಣದಲ್ಲೇ ರೂಪಗೊಂಡ ವ್ಯಕ್ತಿತ್ವ ಅವರದು. ಹೋರಾಟವಿಲ್ಲದ ಬದುಕು 'ನೀರಸ' ಎಂದು ಕೊಂಡವರು ಅವರು. ವಿರೋಧ ಪಕ್ಷಗಳು ಛಿದ್ರವಾಗುತ್ತಿದ್ದುದನ್ನು ಗಮನಿಸಿದ ಅರಸು ಅವರು ಎಲ್ಲಾ ವಿರೋಧಿ ಪಕ್ಷಗಳನ್ನು ಒಂದುಗೂಡಿಸುವ ಕಾರ್ಯದಲ್ಲಿ ತೊಡಗಿದರು. ಎಸ್. ನಿಜಲಿಂಗಪ್ಪನವರ ೮೦ನೇ ಹುಟ್ಟುಹಬ್ಬವನ್ನು ಆಚರಿಸುವ ವೇದಿಕೆಯನ್ನು "ವಿರೋಧ ಪಕ್ಷಗಳ ಐಕ್ಯತೆಯ ವೇದಿಕೆ"[೧೦] ಯನ್ನಾಗಿ ಮಾಡಿದರು.

ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಮೈದಾನದಲ್ಲಿ ನಡೆದ ಬೃಹತ್ ಸಮಾವೇಶದಲ್ಲಿ ಮಾಜಿ ಪ್ರಧಾನಿ ಚರಣ್‌ಸಿಂಗ್, ಜನತಾ ಪಕ್ಷದ ನಾಯಕ ಚಂದ್ರಶೇಖರ್, ಸಮಾಜವಾದಿ ನಾಯಕ ಜಾರ್ಜ್ ಫರ್ನಾಂಡೀಸ್, ರಾಮಕೃಷ್ಣ ಹೆಗಡೆ, ಎಸ್.ಆರ್. ಬೊಮ್ಮಾಯಿ ಮುಂತಾದ ಮುಖಂಡರನ್ನೆಲ್ಲ ಒಂದೇ ವೇದಿಕೆಯಲ್ಲಿ ತಂದ ಕೀರ್ತಿ ಅರಸರವರದು. ಅಧಿಕಾರದ ಆಸೆಯಿಲ್ಲದೆ ವಂಶಪಾರಂಪರ್ಯದ ವಿರುದ್ಧ ಹೋರಾಡುವ ಛಲವನ್ನು ಅವರು ಘೋಷಿಸಿದರು. ಆದರೂ ಅವರ ವಿರೋಧಿ ಐಕ್ಯತೆಯ ಕನಸು ಕೈಗೂಡಲೇ ಇಲ್ಲ. ಈ ಸಂದರ್ಭದಲ್ಲಿಯೇ 'ಲೋಕದಳ' ಒಡೆಯಿತು. ಕಪ್ಪೆಗಳನ್ನು ತಕ್ಕಡಿ ಯಲ್ಲಿಡುವ ಕಾರ್ಯಕ್ಕಿಂತ ಈ ಕೆಲಸ ಕಠಿಣವೆನಿಸಿತು.

## ೩.೩. 'ಕ್ರಾಂತಿರಂಗ ಪಕ್ಷ'ದ ಸ್ಥಾಪನೆ

ರಾಷ್ಟ್ರಮಟ್ಟದಲ್ಲಿ ವಿರೋಧಿಗಳನ್ನು ಒಂದುಗೂಡಿಸುವ ಪ್ರಯತ್ನ ವಿಫಲವಾದಂತೆ ಅರಸು ಅವರು ತಾವು ರಾಷ್ಟ್ರನಾಯಕರಾಗುವ ಭ್ರಮೆಯಿಂದ ಕಳಚಿಕೊಳ್ಳತೊಡಗಿದರು. ಬದಲಾಗಿ ಕರ್ನಾಟಕ ಮಟ್ಟದಲ್ಲಿ ಒಂದು ಪ್ರಾದೇಶಿಕ ಪಕ್ಷ ಕಟ್ಟುವ ಹಂಬಲ ಬೆಳೆಸಿಕೊಂಡರು. ಇದರ ಪರಿಣಾಮವೇ 'ಕ್ರಾಂತಿರಂಗ ಪಕ್ಷ'ದ ಸ್ಥಾಪನೆ, ರಾಜ್ಯಮಟ್ಟದಲ್ಲಿ ತಮಗಿದ್ದ ಜನಪ್ರಿಯತೆಯಿಂದ ಕ್ರಾಂತಿರಂಗವನ್ನು ಇಂದಿರಾ ಕಾಂಗ್ರೆಸ್‌ಪಕ್ಷಕ್ಕೆ ಪರ್ಯಾಯ ಪಕ್ಷವಾಗಿ ಕಟ್ಟುವ ಭರವಸೆಯನ್ನು ಹೊಂದಿದ್ದರು. ಸದ್ಯಕ್ಕೆ ಪ್ರಾದೇಶಿಕ ಪಕ್ಷವಾದರೂ ಮುಂದೆ ಇದನ್ನು ಚರಣ್‌ಸಿಂಗ್‌ರ ಲೋಕದಳದಲ್ಲಿ ವಿಲೀನಗೊಳಿಸುವ ಮೂಲಕ ರಾಷ್ಟ್ರಮಟ್ಟದಲ್ಲಿ ಒಂದು ಪರ್ಯಾಯ ರಾಜಕಾರಣ ರೂಪಿಸುವ ಉದ್ದೇಶ ಅವರಿಗಿತ್ತು. ಎಷ್ಟೇ ಜನಪ್ರಿಯತೆಯಿದ್ದರೂ ಒಂದು ರಾಜಕೀಯ ಪಕ್ಷವನ್ನು ಕಟ್ಟಲು ಅದಕ್ಕೆ ಸುಭದ್ರವಾದ ತಾತ್ವಿಕ ತಳಹದಿ ಇರಬೇಕಾಗುತ್ತದೆ. ಅಷ್ಟು ಸುದೀರ್ಘವಾದ ರಾಜಕೀಯ ಅನುಭವವಿದ್ದರೂ, ಒಳ್ಳೆಯ ಸಂಘಟಕರು ಎಂದು ಹೆಸರು ಮಾಡಿದ್ದರೂ ಅರಸು ಅವರಿಗೆ ಒಂದು ಹೊಸ ಪಕ್ಷವನ್ನು ಕಟ್ಟಲುಬೇಕಾದ ಸೈದ್ಧಾಂತಿಕ ಸಿದ್ಧತೆಗಳಿದ್ದವೇ? ಕ್ರಾಂತಿರಂಗ ಪಕ್ಷದ ತಾತ್ವಿಕ ತಳಹದಿಯನ್ನು ನೋಡಿದರೆ ಈ ಪ್ರಶ್ನೆಗೆ ಉತ್ತರ ನಕಾರಾತ್ಮಕವಾಗಿಯೇ ಇತ್ತು ಎನ್ನುವುದು ತಿಳಿದುಬರುತ್ತದೆ. ಬಹುಶಃ ಅರಸು ಅವರು ತತ್ವಕ್ಕಿಂತ ಅಧಿಕಾರಕ್ಕೆ ಬರುವುದಕ್ಕೆ ಹೆಚ್ಚು ಮಹತ್ವ ಕೊಟ್ಟಿರುವಂತೆ ಕಾಣುತ್ತದೆ. ಈ ಸಂದರ್ಭದಲ್ಲಿ ಎ.ಕೆ. ಸುಬ್ಬಯ್ಯನವರು ಆಡಿದ ಮಾತು ಪ್ರಸ್ತುತವೆನಿಸುತ್ತದೆ.

“ಅರಸರಿಗೆ ರಾಷ್ಟ್ರಮಟ್ಟದಲ್ಲಿ ಅಟಲ್‌ಬಿಹಾರಿ ವಾಜಪೇಯಿ ಬೇಕು, ಆದರೆ ರಾಜ್ಯಮಟ್ಟದಲ್ಲಿ ಜನಸಂಘದ ಸಹವಾಸ ಬೇಡ”. ಇದು ಅರಸರ ತಾತ್ವಿಕ ಇಬ್ಬಂದಿತನವನ್ನು ತೋರಿಸುತ್ತದೆ. ಅಲ್ಲದೆ ಅವರಿಗೆ ಬಂದ ಟೀಕೆಗಳು ವ್ಯಾಪಕವಾಗಿದ್ದವು. ಚುನಾವಣೆಯಲ್ಲಿ ಸೋತ ನಂತರ ಪ್ರಜಾಪ್ರಭುತ್ವದ ಮೌಲ್ಯದ ರಕ್ಷಣೆಗಾಗಿ ವಿರೋಧಿಗಳ ಐಕ್ಯತೆ ಅಗತ್ಯ ಎಂದು ಹೇಳುವ, ವಂಶಪಾರಂಪರ್ಯ ಅಧಿಕಾರದ ವಿರುದ್ಧ ಹೋರಾಡಬೇಕೆನ್ನುವ ಅರಸರವರು, ಅಧಿಕಾರದ ಅವಧಿಯಲ್ಲಿದ್ದಾಗ ಇಂತಹ ಕಳಕಳಿಯಲ್ಲ ಎಲ್ಲಿಗೆ ಹೋಗಿದ್ದವು ಎನ್ನುವುದು. ಅವರ ಅಧಿಕಾರದ ಅವಧಿಯಲ್ಲಿ ಪಕ್ಷದ ಆಂತರಿಕ ಪ್ರಜಾಪ್ರಭುತ್ವಕ್ಕೆ ಮಾನ್ಯತೆ ನೀಡಲಿಲ್ಲ. ತುರ್ತು ಪರಿಸ್ಥಿತಿಯಂತಹ ಸಂದರ್ಭದಲ್ಲಿ ಅವರು ಪ್ರತಿಭಟಿಸಲಿಲ್ಲ. ಹೀಗಾಗಿ ಅರಸರ ನಿಲುವು ನಂಬಿಕೆಗೆ ಅರ್ಹವೆಂಬುದಲ್ಲ ಅದೊಂದು ಅಧಿಕಾರಕ್ಕಾಗಿ ಹೂಡಿದ ಆಟ ಎಂಬ ಭಾವನೆ ಬಲಿಯಿತು.

ಈ ಸಂದರ್ಭದಲ್ಲಿ ಕೋಣಂದೂರು ವೆಂಕಪ್ಪಗೌಡರು ಅರಸುರವರ ಬಗೆಗಿನ ಅಭಿಪ್ರಾಯ ಇಲ್ಲಿ ಉಲ್ಲೇಖಾರ್ಹ. ದೇವರಾಜ ಅರಸರ ಸತ್ಯ ಸಾಧನೆಯ ಬಗ್ಗೆ ಬರೆಯುತ್ತಾ ಅವರ ಕ್ರಾಂತಿರಂಗದ ಸ್ಥಾಪನೆಯ ಬಗ್ಗೆ ವೆಂಕಪ್ಪಗೌಡರು ಹೀಗೆ ಹೇಳುತ್ತಾರೆ. “ಅರಸರ ರಾಜಕಾರಣ ಚಿಂತನೆಯು ಒಂದು ತಾತ್ವಿಕ ನೆಲೆಗಟ್ಟಿನ ಮೇಲೆ ನಿಂತ ಗಟ್ಟಿಯಾದ ಸೌಧವಲ್ಲ.”[??] ಅವರೊಬ್ಬ ಪರಂಪರೆಯ ನಿರ್ಮಾಪಕರಲ್ಲ. ಅವರಿಗೆ ಒಂದು ಪರಂಪರೆ ಇಲ್ಲದಿದ್ದರಿಂದಲೇ ಸಮರ್ಥ ಅನುಯಾಯಿಗಳಿರಲಿಲ್ಲ. ತಾತ್ವಿಕ ಮಾರ್ಗದಲ್ಲಿ ಆ ಆದರ್ಶವನ್ನು ಸ್ಥಾಪಿಸಿ ತೋರಿಸಿ ಕೊಡುವ, ಹೊಸ ಹೊಸ ಸಾಧ್ಯತೆಗಳನ್ನು ವಾಸ್ತವವನ್ನಾಗಿ ಮಾರ್ಪಡಿಸಬಲ್ಲ ಸಮರ್ಥ ಅನುಯಾಯಿಗಳ ತಂಡವಿಲ್ಲದೆ ಪರಂಪರೆ ನಿರ್ಮಾಣ ವಾಗುವುದಿಲ್ಲ. ಹೀಗಾಗಿ ಅರಸರ ಜೀವನದ ಒಳ ಪೊಟರೆಯಲ್ಲಿ ಬಾಳಿ ಬೆಳೆದ ಅರಸರ ಬೆನ್ನ ಹಿಂದೆ ಮುಂದೆ ಸಮಯ ಸಾಧಕರಾಗಿ ಅವರ ಅಧಿಕಾರದ ಬೆಳದಿಂಗಳ ಬೆಳಕಿನಲ್ಲಿ ಬದುಕಿದರು.

ರಾಜಕಾರಣದ ಕತ್ತಲೆಯಿದ್ದು ಜೀವನದಲ್ಲಿ ಏಳಲಾರದ, ನಿಶ್ಚಿತ ಗೊತ್ತುಗುರಿ ಹೊಂದಿರದ ಪ್ರಪಾತದಲ್ಲಿ ಬಿದ್ದವರೆಲ್ಲರು (ಪುಂಡರು) ಅವರ ಕೃಪೆ ಮಾತ್ರದಿಂದಲೆ ವ್ಯಕ್ತಿತ್ವ ಗಳಿಸಿಕೊಂಡರು. ಶಾಸಕರು, ಮಂತ್ರಿಗಳು, ದೊಡ್ಡವರು ಎನಿಸಿಕೊಂಡವರು, ಅವರ ಔದಾರ್ಯಗುಣ ಅಂತಹ ಜೀವಿಗಳಿಗೆ ಅದೃಷ್ಟದ ಬಾಗಿಲು ತೆರೆಸಿದರೂ, ಅರಸರ ದೃಷ್ಟಿಯಿಂದ ದುರಂತ. ಏಕೆಂದರೆ ಅರಸು ತಮ್ಮ ಜೀವನದ ಬದುಕಿನ ಎದುರಿನಲ್ಲಿಯೆ ವಿಶ್ವಾಸದ್ರೋಹಕ್ಕೆ ಬಲಿಯಾಗಿ ನಿಸ್ಸಾಹಯಕ ಸ್ಥಿತಿಗೆ ತಲುಪಿ ದುರಂತ ಅಪ್ಪಬೇಕಾಯಿತು. ಅಲ್ಲದೆ ಅರಸು ಕಟ್ಟಿ ಬೆಳೆಸಿದ ಸಂಬಂಧಗಳು ಮುಕ್ತವಾದವುಗಳಲ್ಲ ರಾಜಕೀಯಕ್ಕಿಂತ ಮಿಗಿಲಾದವುಗಳು. ಆದುದರಿಂದಲೆ ಅರಸು ಅಂತಹವನ್ನು ಸಾರ್ವಜನಿಕವಾಗಿ ಪ್ರತಿಭಟಿಸುವ ನೈತಿಕ ಶಕ್ತಿಯನ್ನು ಹೊಂದಿರಲಿಲ್ಲ. ಹೀಗಾಗಿ ಅರಸು ಅವರ ರಾಜಕಾರಣ ತಾತ್ವಿಕತೆ ಯಿಲ್ಲದೆ ಸೊರಗಿ ಕುಸಿದು ಬಿದ್ದಿದೆ. ಇದಕ್ಕೆ ಕಾರಣ ಅರಸರ ರಾಜಕಾರಣ.

ಹೀಗೆ ದೇವರಾಜ ಅರಸು ಅವರು ಕಟ್ಟಿದ ಕ್ರಾಂತಿರಂಗ ಪಕ್ಷ, ಸಂಸ್ಥಾ ಕಾಂಗ್ರೆಸ್ ಪರಂಪರೆಯಿಂದ ಬಂದ ಜನತಾಪಕ್ಷ, ಜನಸಂಘದ ಪರಂಪರೆಯಿಂದ ಬಂದ ಬಿಜೆಪಿ, ಎರಡು ಕಮ್ಯೂನಿಸ್ಟ್

ಪಾರ್ಟಿಗಳು ಮತ್ತು ಅನೇಕ ಹೋರಾಟದ ವೇದಿಕೆಗಳು ಸಾಂಘಿಕವಾಗಿ, ಗುಂಡುರಾವ್ ನೇತೃತ್ವದ ಸರ್ಕಾರದ ವಿರುದ್ಧ ಹೋರಾಟ ನಡೆಸಿದವು. ಅದರ ಪ್ರತಿಫಲವೇ ರಾಜ್ಯದಲ್ಲಿ ಮೊದಲ ಕಾಂಗ್ರೆಸ್ಸೇತರ ಸರ್ಕಾರ.

ಒಟ್ಟಿನಲ್ಲಿ ದೇವರಾಜ ಅರಸು ೨೫ ವರ್ಷಗಳ ಕಾಲ ಪ್ರಬಲ ಜಾತಿಗಳ ಹಿಡಿತದಲ್ಲಿದ್ದ ರಾಜಕೀಯ ಅಧಿಕಾರವನ್ನು ಹಿಂದುಳಿದವರು ಮತ್ತು ದುರ್ಬಲ ವರ್ಗದವರಿಗೆ ದೊರಕಿಸಿ ಕೊಟ್ಟರೆ, ರಾಮಕೃಷ್ಣ ಹೆಗಡೆಯವರು ಸುಮಾರು ೩೬ ವರ್ಷಗಳ ಕಾಂಗ್ರೆಸ್ ಆಡಳಿತದ ಕಪಿಮುಷ್ಠಿಯಿಂದ ಮೊದಲ ಬಾರಿಗೆ ಕಾಂಗ್ರೆಸ್ಸೇತರ ಸರ್ಕಾರದ ಸ್ಥಾಪನೆಗೆ ನಾಂದಿಯಾದರು. ಅದೇನೆಯಿದ್ದರೂ ಭಾರತದ ರಾಜಕಾರಣದ ಇತಿಹಾಸಕ್ಕೆ ಒಂದು ಹೊಸ ತಿರುವು ತಂದು ಕೊಟ್ಟ ಧೀಮಂತಿಕೆ ಅರಸು ಅವರದು.

**ಟಿಪ್ಪಣಿಗಳು**

೧. ವಡ್ಡರ್ಸೆ ರಘುರಾಮ್ ಶೆಟ್ಟಿ., (೨೦೦೦), **ಬಹುರೂಪಿ ಅರಸು,** ಪು.೫೬

೨. ದೇವರಾಜ ಅರಸು ಸಂಶೋಧನಾ ಸಂಸ್ಥೆ., (೧೯೯೭), **ಸಾಧನೆಗಳ ಸರದಾರ ದೇವರಾಜ ಅರಸು,** ಪು.೩೯

೩. ವೆಂಕಪ್ಪಗೌಡ ಕೋಣಂದೂರು., (ಸಂ.), (೧೯೮೪), **ಪರಿವರ್ತನೆಯ ಹರಿಕಾರ ಡಿ. ದೇವರಾಜ ಅರಸು,** ಪು.೬೭

೪. ವಡ್ಡರ್ಸೆ ರಘುರಾಮ್ ಶೆಟ್ಟಿ., (೨೦೦೦), ಮೇಲಿನದೆ, ಪು.೮೪

೫. ಅದೇ, ಪು.೮೭

೬. ಅದೇ, ಪು.೮೯

೭. ಜೆ.ಎಸ್. ಸದಾನಂದ., (೨೦೦೦), **ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ ಡಿ. ದೇವರಾಜ ಅರಸು,** ಪು.೧೩

೮. ದೇವರಾಜ ಅರಸು ಸಂಶೋಧನಾ ಸಂಸ್ಥೆ., (೧೯೯೭), ಮೇಲಿನದೆ, ಪು.೭೫

೯. ಜಾಗೀರದಾರ್ ಐ.ಕೆ., (೧೯೭೯), **ಅರಸು ಆಡಳಿತ ರಂಗ,** ಪು.೧೯

೧೦. ಅದೇ, ಪು.೭೩

೧೧. ವೆಂಕಪ್ಪಗೌಡ ಕೋಣಂದೂರು., (ಸಂ.), (೧೯೮೪), ಮೇಲಿನದೆ, ಪು.೪೭

ಅಧ್ಯಾಯ ೪

# ಅರಸು: ಸಮಾಜದ ಕ್ರಾಂತಿಕಾರ

೪.೧. ಅರಸು ಅವರ ಭೂಸುಧಾರಣಾ ಕಾಯ್ದೆಯ ಚಿಂತನೆ

೪.೨. ಅರಸು ಅವರ ಭೂಸುಧಾರಣೆ ಕಾಯ್ದೆಯ ಉದ್ದೇಶಗಳು

೪.೩. ಎಲ್.ಜಿ. ಹಾವನೂರ ಆಯೋಗದ ನೇಮಕ ಕುರಿತ ಚಿಂತನೆ

೪.೪. ಬದುಕಿನ ಆಸರೆ ಕಲ್ಪಿಸಿದ ಜೀತ ವಿಮುಕ್ತಿ

೪.೫. ಬಡತನ ನಿರ್ಮೂಲನ ಚಿಂತನೆ

೪.೬. ಮಲಹೊರುವ ಪದ್ಧತಿ ನಿಷೇಧ ಕುರಿತು ಚಿಂತನೆ

೪.೭. ಹಿಂದುಳಿದ ವರ್ಗಗಳ ಸಂಘಟನೆ ಕುರಿತು ಚಿಂತನೆ

೪.೮. ಅಸ್ಪೃಶ್ಯತೆ ನಿವಾರಣೆ ಕುರಿತು ಚಿಂತನೆ

೪.೯. ಶಿಕ್ಷಣ ವ್ಯವಸ್ಥೆಯಲ್ಲಾದ ಬದಲಾವಣೆ

ಕಳೆದ ಆರು ದಶಕಗಳಲ್ಲಿ ಕರ್ನಾಟಕ ರಾಜ್ಯವು ಮಹತ್ತರವಾದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಬದಲಾವಣೆಗಳನ್ನು ಕಂಡಿದೆ. ಇದರ ಮೊದಲ ಹಂತ, ಒಡೆಯರ ಆಳ್ವಿಕೆಯಲ್ಲಿದ್ದ ಮೈಸೂರು ರಾಜ್ಯದಲ್ಲಿ ಕಳೆದ ಶತಮಾನದ ಇಪ್ಪತ್ತರ ದಶಕದಲ್ಲಿ ಬ್ರಾಹ್ಮಣೇತರ ಚಳವಳಿಯಿಂದ ಪ್ರಾರಂಭವಾಯಿತು. ಈ ಪ್ರತಿಭಟನೆಯು ಸ್ವಾತಂತ್ರ್ಯಪೂರ್ವದ ಮದ್ರಾಸ್ ಸಂಸ್ಥಾನದ 'ಜಸ್ಟೀಸ್ ಪಾರ್ಟಿ'ಯಿಂದ ಪ್ರಭಾವಿತವಾಗಿತ್ತು. ಈ ಪ್ರತಿಭಟನೆಯಲ್ಲಿ ಬ್ರಾಹ್ಮಣೇತರರಾದ ಒಕ್ಕಲಿಗ ಮತ್ತು ಲಿಂಗಾಯತ ಮುಖಂಡರು ಸಾಮಾಜಿಕ, ಆರ್ಥಿಕ ಮತ್ತು ಆಡಳಿತಾತ್ಮಕ ಕ್ಷೇತ್ರದಲ್ಲಿದ್ದ ಬ್ರಾಹ್ಮಣರ ದಬ್ಬಾಳಿಕೆಯನ್ನು ವಿರೋಧಿಸಿದರು. ಇದರ ಉದ್ದೇಶ, ಸರ್ಕಾರಿ ನೌಕರಿಗೆ ಸಂಬಂಧಿಸಿದ ಮತ್ತು ಶೈಕ್ಷಣಿಕ ಸಂಸ್ಥೆಗಳಲ್ಲಿಯ ಅವಕಾಶಗಳನ್ನು ಬ್ರಾಹ್ಮಣೇತರರಿಗೆ ಬಹುಪಾಲು ಹಂಚಬೇಕೆಂದು ಆಗಿನ ಸರ್ಕಾರವನ್ನು ಒತ್ತಾಯಿಸುವುದಾಗಿತ್ತು.

ಇದರ ಎರಡನೆಯ ಹಂತದಲ್ಲಿ, ಅಂದರೆ ೧೯೫೬ರ ಏಕೀಕೃತ ಕರ್ನಾಟಕದ ಬ್ರಾಹ್ಮಣೇತರರಲ್ಲಿ ಪ್ರಮುಖರಾದ ಒಕ್ಕಲಿಗ ಮತ್ತು ಲಿಂಗಾಯತರ ಎರಡು ಪ್ರಮುಖ ಗುಂಪುಗಳಾಗಿ ರೂಪುಗೊಂಡವು. ಸ್ವಾತಂತ್ರ್ಯಪೂರ್ವದ ಮೈಸೂರು ರಾಜ್ಯದಲ್ಲಿ ಒಕ್ಕಲಿಗರು ತಮ್ಮ ಸಂಖ್ಯೆ ಹಾಗೂ ಆರ್ಥಿಕ ದೃಷ್ಟಿ ಯಿಂದ ಪ್ರಬಲರಾಗಿದ್ದರು. ಹೀಗಾಗಿ ಆಡಳಿತವು ಹೆಚ್ಚಿನ ಪಾಲು ಬ್ರಾಹ್ಮಣರ ಕೈಯಲ್ಲಿದ್ದರೂ ಭಾರತದ ಸ್ವಾತಂತ್ರ್ಯದಿಂದ ಕರ್ನಾಟಕದ ಪುನರ್ರಚನೆಯವರೆಗೆ ಒಕ್ಕಲಿಗರು ರಾಜಕೀಯ ಅಧಿಕಾರವನ್ನು ತಮ್ಮ ಕೈಯಲ್ಲಿಯೆ ಕೇಂದ್ರೀಕರಿಸಿಕೊಂಡಿದ್ದರು. ಆದರೆ ರಾಜ್ಯದ ಪುನರ್ರಚನೆಯ ಅನಂತರ ಒಕ್ಕಲಿಗರಿ ಗಿಂತ ಬಹುಸಂಖ್ಯಾತರಾಗಿದ್ದ ಲಿಂಗಾಯತರು ರಾಜಕೀಯದಲ್ಲಿ ಪ್ರಬಲರಾಗಿ ಒಕ್ಕಲಿಗರನ್ನು ಹಿಂದೆ ಹಾಕಿದರು. ಅಲ್ಲದೇ ಶೈಕ್ಷಣಿಕವಾಗಿಯೂ ಅವರು ಮುಂದುವರಿದವರಾಗಿದ್ದರಿಂದ ಆಡಳಿತದಲ್ಲೂ ಪ್ರವೇಶಿಸಿದರು. ಈ ದಿಸೆಯಲ್ಲಿ ರಾಜ್ಯದ ಲಿಂಗಾಯತ ಶಿಕ್ಷಣ ಸಂಸ್ಥೆಗಳು ಮತ್ತು ವೀರಶೈವ ಮಠಗಳ ಪಾತ್ರ ಗಣನೀಯ. ಆದರೆ ಲಿಂಗಾಯತರ ರಾಜಕೀಯ ಪ್ರಾಬಲ್ಯ ಬಹುದಿನ ನಡೆಯಲಿಲ್ಲ. ಕಾರಣ ಹಿಂದುಳಿದ, ದಲಿತ ಹಾಗೂ ಅಲ್ಪಸಂಖ್ಯಾತರು ಆಗಲೇ ರಾಜಕೀಯವಾಗಿ ಸಂಘಟಿತರಾಗುತ್ತಿದ್ದುದು.

೧೯೬೯ರಲ್ಲಿ ರಾಷ್ಟ್ರೀಯಕಾಂಗ್ರೆಸ್ ಒಡೆದು ಹೊಸ ನಾಯಕತ್ವ ಬಂದ ನಂತರ ಮೂರನೆ ಹಂತದ ರಾಜಕೀಯಕ್ಕೆ ನಾಂದಿ ಹಾಡಿತ್ತು. ಈ ಹಂತದಲ್ಲಿ ಡಿ. ದೇವರಾಜ ಅರಸರು ರಾಜ್ಯದ ಅತ್ಯಂತ ಪ್ರಭಾವಶಾಲಿ ರಾಜಕೀಯ ಮುಖಂಡರಾಗಿ ತಮ್ಮ ಅಧಿಕಾರದ ಬುನಾದಿ ಕಟ್ಟಲು ಬ್ರಾಹ್ಮಣೇತರರಾದ ಹಿಂದುಳಿದ, ದಲಿತ, ಅಲ್ಪಸಂಖ್ಯಾತ ವರ್ಗಗಳನ್ನು ಸಂಘಟಿಸಲು ಪ್ರಯತ್ನಿಸಿದರು. ಅರಸು ಅವರು ಸ್ವತಃ ಹಿಂದುಳಿದ ಜಾತಿಯ ಕ್ಷತ್ರಿಯರು. ಇವರು ಒಕ್ಕಲಿಗ ಮತ್ತು ಲಿಂಗಾಯತರಲ್ಲದ ಬ್ರಾಹ್ಮಣೇತರರನ್ನು ಸಣ್ಣ-ಪುಟ್ಟ ಜಾತಿ-ವರ್ಗಗಳನ್ನು ಒಂದುಗೂಡಿಸಿದರು. ಸ್ವತಃ ಕಾಂಗ್ರೆಸ್ 'ಐ'

ನಾಯಕರಾಗಿದ್ದುದರಿಂದ ಈ ಅವಕಾಶವನ್ನು ಉಪಯೋಗಿಸಿಕೊಂಡು ಪಾರಂಪರಿಕವಾಗಿ ಪಕ್ಷವನ್ನು ಬೆಂಬಲಿಸುತ್ತಿದ್ದ ಹರಿಜನ ಮತ್ತು ಮುಸ್ಲಿಮರನ್ನು ತಮಗೆ ಬೆಂಬಲ ನೀಡುವಂತೆ ಮನವೊಲಿಸಿದರು. ಹೀಗೆ ೧೯೭೦ರ ಅವಧಿಯಲ್ಲಿ ಅರಸುರವರ ನಾಯಕತ್ವದಲ್ಲಿ ಬ್ರಾಹ್ಮಣೇತರರಾದ ದೀನ-ದಲಿತ ಹಾಗೂ ಹಿಂದುಳಿದ ಜಾತಿಗಳ ಜಾಗೃತಿ ಪ್ರಬಲವಾಗತೊಡಗಿತು. "ಈ ಎರಡು ಕೋಮುಗಳಲ್ಲಿನ ಘರ್ಷಣೆಯ ಮಧ್ಯೆ ಕರ್ನಾಟಕದ ಪ್ರಗತಿ ಕುಂಠಿತವಾಗಿತ್ತು"[೧] - ಈ ಮಾತು ನಿಜವೋ ಎಂಬಂತೆ ಉಳಿದ ಕೋಮಿನ ಜನರಿಗೆ ಧ್ವನಿಯೇ ಇಲ್ಲವಾಗಿತ್ತು. ಆಡಳಿತದಲ್ಲಿ ಅವರಿಗೆ ಸರಿಯಾದ ಸ್ಥಾನಮಾನಗಳೇ ಇರಲಿಲ್ಲ. ಈ ಎರಡು ಕೋಮಿನವರನ್ನು ಹೊರತುಪಡಿಸಿ ಇತರೆಯವರು ಮುಖ್ಯಮಂತ್ರಿಯಾಗುವುದನ್ನು ಕನಸಿನಲ್ಲಿ ಕಾಣಲಾಗದಂಥ ರಾಜಕೀಯ ಪರಿಸ್ಥಿತಿಯಲ್ಲಿ ಡಿ. ದೇವರಾಜ ಅರಸು ಅವರು ಕರ್ನಾಟಕದ ಮುಖ್ಯಮಂತ್ರಿಯಾಗುವುದು ಸುಲಭದ ಮಾತಾಗಿರಲಿಲ್ಲ.

ಯಾವಾಗಲೂ ಕರ್ನಾಟಕ, ಕನ್ನಡ ಜನತೆಯ ಸಮಗ್ರ ಅಭಿವೃದ್ಧಿಯ ಬಗ್ಗೆ ಕಳಕಳಿಯಿಂದ ಚಿಂತಿಸಿ, ಆ ಚಿಂತನೆಯನ್ನು ಅನುಷ್ಠಾನಗೊಳಿಸಿದ ಡಿ. ದೇವರಾಜ ಅರಸು 'ಕರ್ನಾಟಕಕ್ಕೆ ಶುಭವಾಗಲಿ' ಎಂದು ಕರ್ನಾಟಕ ಅಭಿವೃದ್ಧಿಗೆ ಕಾರಣರಾದರು. 'ಹಿಂದುಳಿದ, ದಲಿತ ಹಾಗೂ ಅಲ್ಪಸಂಖ್ಯಾತ ವರ್ಗಗಳು ಅಭಿವೃದ್ಧಿಯಾಗದ ಹೊರತು ನಾವು ಅಭಿವೃದ್ಧಿ ಹೊಂದಲು ಸಾಧ್ಯವಾಗಲಾರದು' ಎಂದು ಅರಿತಿದ್ದರು. ಅರಸರು ದೇಶದ ಬೇರೆ ಯಾವ ರಾಜ್ಯದಲ್ಲಿಯೂ ಜಾರಿಗೆ ತರಲಾಗದಂತಹ ಕಾನೂನು ನೀತಿಗಳನ್ನು ಜಾರಿಗೆ ತಂದರು. ವ್ಯಕ್ತಿ ಹಾಗೂ ಸಮೂಹ ಇವುಗಳ ಸಮನ್ವಯದ ಅಭಿವೃದ್ಧಿ ಸೂತ್ರವೇ ನಾಡಿನ ಅಭ್ಯುದಯಕ್ಕೆ ಕಾರಣವಾಗುತ್ತದೆ ಎಂದು ಮನಗಂಡಿದ್ದ ಅರಸುರವರು ವ್ಯಕ್ತಿಯನ್ನು ಘಟಕವನ್ನಾಗಿ ಪರಿವರ್ತಿಸುವ ಕ್ರಾಂತಿಕಾರಕ ವಿಚಾರಧಾರೆಯನ್ನು ಹೊಂದಿದ್ದರು.

ರಾಷ್ಟ್ರಮಟ್ಟದಲ್ಲಿಯೂ ತಮ್ಮ ವರ್ಚಸ್ಸನ್ನು ಹೊಂದಿದ್ದ ಅರಸುರವರು ಬಡತನ ನಿರ್ಮೂಲನೆ, ಭೂಸುಧಾರಣೆ, ಕೃಷಿ, ಸಾಮಾಜಿಕ ತಾರತಮ್ಯಗಳ ನಿವಾರಣೆ, ಆರ್ಥಿಕ ಸಮಾನತೆ, ಜ್ಞಾನ-ವಿಜ್ಞಾನ, ತಂತ್ರಜ್ಞಾನ, ನೀರಾವರಿ, ರಂಗಭೂಮಿ, ಸಾಹಿತ್ಯ, ಶಿಕ್ಷಣ ಈ ಎಲ್ಲಾ ಕ್ಷೇತ್ರಗಳಲ್ಲಿಯೂ ಚಿಂತನೆ ನಡೆಸಿದವರು. ಅರಸು ಅವರು ಸ್ವತಂತ್ರ ಅಧ್ಯಯನದಿಂದಲೇ ತಮ್ಮ ದೂರದೃಷ್ಟಿಯನ್ನು ಸಾಧಿಸಿದ್ದರು. ಎಲ್ಲಕ್ಕೂ ಮಿಗಿಲಾಗಿ ಆಡಳಿತದಲ್ಲಿ ಕನ್ನಡದ ಅನುಷ್ಠಾನಕ್ಕೆ ಆದ್ಯತೆ ಕೊಟ್ಟರು. ಈ ರೀತಿಯಾದ ಸಾಮಾಜಿಕ ಪರಿವರ್ತನೆಗೆ ನಾಂದಿ ಹಾಡಿದ ಅರಸು ಇಂದಿಗೂ "ಹಿಂದುಳಿದ, ಅಲ್ಪಸಂಖ್ಯಾತರ ಮನಸ್ಸಿನಾಳದಲ್ಲಿ ಮರೆಯಲಾಗದ ಜನನಾಯಕರಾಗಿ" ಉಳಿದಿದ್ದಾರೆ. ಅಲ್ಲದೆ ಹಿಂದುಳಿದ ವರ್ಗಗಳ ಜನತೆಗೆ 'ಬೆಳಕು ತಂದ ಸೂರ್ಯ' ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಜಡವಾಗಿದ್ದ ಗ್ರಾಮೀಣ ಸಮಾಜದಲ್ಲಿ ಚಲನಶೀಲತೆ, ಚಿಂತನೆ, ಶಿಕ್ಷಣ, ದುಡಿಮೆ ಕುರಿತು ಜನತೆಯ ಅರಿವಿಗೆ ತಂದ ನಾಯಕರೂ ಹೌದು. "ಹಿಂದುಳಿದ ವರ್ಗಗಳ ಹರಿಕಾರರಾಗಿ"[೨] ಕರ್ನಾಟಕದಲ್ಲಿ ಬಸವಣ್ಣನ ನಂತರ ದಲಿತ ಹಿಂದುಳಿದ ವರ್ಗದವರನ್ನು ಕಟ್ಟಿಕೊಂಡು ಸಮಾಜದಲ್ಲಿ ಪುರೋಹಿತಶಾಹಿ ಮತ್ತು ಜಮಿನ್ದಾರಿ ಶಕ್ತಿಗಳ ವಿರುದ್ಧ ಬಂಡೆದ್ದವರಲ್ಲಿ ಅರಸು ಅವರೇ ಮೊದಲಿಗರಾಗಿದ್ದಾರೆ. ಒಂದು ರೀತಿಯಲ್ಲಿ ಅರಸುರವರನ್ನು "ಹಿಂದುಳಿದ ವರ್ಗದ ಚಳವಳಿಯ ಪಿತಾಮಹ" ಎಂದರೆ ತಪ್ಪಾಗಲಾರದು.

ಅಪ್ಪಟ ಗ್ರಾಮೀಣ ಒಕ್ಕಲೆಯ ರೈತ ಕುಟುಂಬದಿಂದ ಬಂದ ದೇವರಾಜ ಅರಸರು ಜನಸಾಮಾನ್ಯರ ಕಷ್ಟ-ಸುಖಗಳು ಹಾಗೂ ನ್ಯಾಯ-ಅನ್ಯಾಯಗಳನ್ನು ಕಂಡು ಬೆಳೆದ ನಾಯಕರಾಗಿದ್ದ ಕಾರಣ ಅವರಿಗೆ ಭೂಮಿಯ ನಿಜವಾದ ಗೆಳೆಯ ಯಾರು? ಅದರ ವಾರಾಸುದಾರ ಯಾರಾಗಬೇಕು? ಎಂಬುದರ ಬಗ್ಗೆ ಸ್ಪಷ್ಟ ಅರಿವಿತ್ತು. ನೊಂದವರನ್ನು ಕಂಡರೆ ಮರುಗುವ ಮನೋಧರ್ಮದವರಾಗಿದ್ದ ದೇವರಾಜ ಅರಸು ತಮ್ಮ ವ್ಯಕ್ತಿತ್ವದ ಇನ್ನೊಂದು ಮುಖವಾದ ಧೈರ್ಯ ಹಾಗೂ ಎದೆಗಾರಿಕೆಯಿಂದ ತುಂಬ ಕ್ರಾಂತಿಕಾರಕವಾದ ಭೂಸುಧಾರಣಾ ಕಾಯ್ದೆಯನ್ನು ಜಾರಿಗೆ ತಂದರು. ಇದರಿಂದ ಸಾವಿರಾರು ವರ್ಷಗಳಿಂದ ಶೋಷಿತರಾಗಿದ್ದ ಗೇಣಿದಾರರಿಗೆ (ಶೂದ್ರರು, ಹಿಂದುಳಿದವರು, ಹಾಗೂ ದಲಿತರು ಸೇರಿದ ಹಾಗೆ) ನ್ಯಾಯಯುತವಾಗಿ ಭೂಮಿ ದೊರಕಿತು. ಇದು ಸಾಮಾಜಿಕ ನ್ಯಾಯದ ಬಗ್ಗೆ ಅರಸರಿಗಿದ್ದ ಅಚಲ ನಿಷ್ಠೆ ಹಾಗೂ ದಕ್ಷತೆಗೆ ಸಾಕ್ಷಿಯಾಗಿದೆ. ಅವರ ಧೀರತ್ವದ ಈ ಸುಧಾರಣಾ ಕೆಲಸ ಕರ್ನಾಟಕದಲ್ಲಿ ಮಾತ್ರವಷ್ಟೇ ಅಲ್ಲ ಇಡೀ ಭಾರತದ ಹೆಗ್ಗಳಿಕೆಗೆ ಪಾತ್ರವಾದದ್ದು ಚರಿತ್ರೆಯಾಗಿದೆ.

ಇದರಿಂದಾಗಿ ದೇವರಾಜ ಅರಸುರವರನ್ನು ಒಬ್ಬ ರಾಜಕಾರಣಿಯೆಂದು ಕರೆಯುವುದಕ್ಕಿಂತ ಒಬ್ಬ ಸಮಾಜ ಸುಧಾರಕರೆಂದು ಕರೆದರೆ ಅವರ ವ್ಯಕ್ತಿತ್ವಕ್ಕೆ ಹೆಚ್ಚು ಮಹತ್ವ ಬರುತ್ತದೆ. ಹೀಗಾಗಿ ಅವರು ರಾಜ್ಯದಲ್ಲಿ ಜಾರಿಗೆ ತಂದ ಹಲವು ಸಾಮಾಜಿಕ ಸುಧಾರಣೆಗಳು ಹೊಸ ಸಮಾಜ ನಿರ್ಮಾಣದ ವ್ಯವಸ್ಥೆಯಲ್ಲಿ ಹೆಚ್ಚಿನ ಮಹತ್ವ ಪಡೆದವು. ಅವುಗಳೆಂದರೆ-

### ೪.೧. ಅರಸು ಅವರ ಭೂಸುಧಾರಣಾ ಕಾಯ್ದೆಯ ಚಿಂತನೆ

ಜವಾಹರಲಾಲ್ ನೆಹರುರವರ ನೇತೃತ್ವದಲ್ಲಿ ಕಾಂಗ್ರೆಸ್ ಭೂಸುಧಾರಣೆಗಳ ಪರವಾಗಿ ಆಗಾಗ್ಗೆ ಠರಾವುಗಳನ್ನು ೧೯೪೭ರಿಂದ ೧೯೬೪ರವರೆಗೆ ಅನುಮೋದಿಸಿತ್ತು. ಆದರೆ ಅದನ್ನು ಜಾರಿಗೊಳಿಸಲು ಕಾಂಗ್ರೆಸ್ ಅಧಿಕಾರದಲ್ಲಿದ್ದ ಯಾವ ರಾಜ್ಯವು ಗಂಭೀರ ಪ್ರಯತ್ನ ನಡೆಸಿರಲೇ ಇಲ್ಲ. ಈ ಮಾತು ೧೯೭೦ಕ್ಕೂ ಹಿಂದಿನ ಮೈಸೂರು ರಾಜ್ಯಕ್ಕೂ ಅನ್ವಯಿಸುತ್ತದೆ. ೧೯೪೦-೧೯೬೫ ರವರೆಗೆ ಕಾಂಗ್ರೆಸ್‌ನೊಳಗೆ ಬಲಪಂಥೀಯ ನಾಯಕರಾದ ರಾಜಾಜಿ, ಕಾಮರಾಜ್, ನಿಜಲಿಂಗಪ್ಪ, ವಲ್ಲಭಬಾಯ್ ಪಟೇಲ್, ಗೋವಿಂದ ವಲ್ಲಭ ಪಂತ್, ವಸಂತರಾವ್ ಪಾಟೀಲ್‌ರವರಂಥ ಮುಖಂಡರು ಪ್ರಬಲರಾಗಿದ್ದರು. ಇವರ ಮನವೊಲಿಸಿ ಕಾಂಗ್ರೆಸ್ಸಿನ ಆರ್ಥಿಕ ನೀತಿಗೆ ಸಮಾಜವಾದಿ ನೆಲೆಯನ್ನು ದೊರಕಿಸಿಕೊಡಲು ನೆಹರು ಎರಡು ದಶಕಗಳಿಗೂ ಹೆಚ್ಚು ಕಾಲ ಅವಿರತವಾಗಿ ಶ್ರಮಿಸಬೇಕಾಯಿತು. ಆದರೂ ಭೂ ಸುಧಾರಣೆಗಳಂಥ ಸಮಾಜವಾದಿ ಕ್ರಮಗಳನ್ನು ಜಾರಿಗೊಳಿಸಲಾಗಲಿಲ್ಲ. ಏಕೆಂದರೆ ಅಂದು ಕಾಂಗ್ರೆಸ್‌ನಲ್ಲಿ ಭೂಮಾಲೀಕ ವರ್ಗವೇ ಮುಂಚೂಣಿಯಲ್ಲಿತ್ತು. ಇದನ್ನು ೧೯೬೯ರ ಐತಿಹಾಸಿಕವಾದ ಪಕ್ಷದ ವಿಭಜನೆ ಮಾತ್ರವಷ್ಟೆ ತೊಡೆದು ಹಾಕಲು ಕಾರಣವಾಯಿತು. ಇಂಥವರ ಪರಂಪರೆ ಕಾಂಗ್ರೆಸ್ಸಿಗಿತ್ತು. ಆದರೂ ದೇವರಾಜ ಅರಸರು ಪ್ರಗತಿಪರರಾಗಿದ್ದರು. ಹೀಗಾಗಿ ಅರಸರು ಕರ್ನಾಟಕದ ಮಟ್ಟಿಗೆ ಭೂಸುಧಾರಣೆಯ ಹರಿಕಾರರೂ ಹೌದು.

ಅರಸು ಜಾರಿಗೆ ತಂದ ಈ ಭೂಸುಧಾರಣಾ ಕಾಯ್ದೆ ಹಿಂದಿನ ಎಲ್ಲಾ ಕಾಯ್ದೆಗಳಿಗಿಂತ ಹೆಚ್ಚು ಪರಿಣಾಮಕಾರಿಯಾದದ್ದು, ಇಡೀ ಭಾರತದಲ್ಲಿಯೇ ಚರ್ಚಿತವಾದ ಮತ್ತು ಚರ್ಚಿತವಾಗುತ್ತಿರುವ

ಕ್ರಾಂತಿಕಾರಿ ಶಾಸನವಾದ ಈ ಭೂಸುಧಾರಣಾ ಕಾಯ್ದೆ ಅವರ ಸಾಧನೆಗಳಲ್ಲಿ ಅತ್ಯಂತ ಮಹತ್ವದ್ದು. ಈ ಹಿಂದೆ ಆಳ್ವಿಕೆ ನಡೆಸಿದ ಯಾವುದೇ ಸರ್ಕಾರ ಈ ಕಾಯ್ದೆಯನ್ನು ಜಾರಿಗೆ ತರುವ ಕುರಿತು ನಿರ್ಧರಿಸಿರಲಿಲ್ಲ. ಪ್ರಬಲ ಜಾತಿವರ್ಗಗಳ ರಾಜಕಾರಣವೇ ಇದಕ್ಕೆ ಕಾರಣ. ಆದರೆ ಅರಸು ರಾಜ್ಯದ ಮುಖ್ಯಮಂತ್ರಿಯಾಗಿದ್ದೇ ತಡ, ಮೊದಲು ಮಾಡಿದ ಕಾರ್ಯವೇ ಈ ಭೂಸುಧಾರಣೆ. ಇದು ದುರ್ಬಲ ವರ್ಗದ ಜನರಿಗೆ ಸಾಮಾಜಿಕ ನ್ಯಾಯ ಒದಗಿಸುವಲ್ಲಿ ಮಹತ್ವದ ಪ್ರಭಾವ ಬೀರಿತು. ಹೀಗಾಗಿ ಅರಸು ಅವರಿಗೆ ಈ ಕುರಿತು ಮೊದಲೇ ಆಲೋಚನೆ ಇತ್ತೆಂದು ಕಂಡುಬರುತ್ತದೆ. ಗೇಣಿದಾರನಿಗೆ ಅನುಕೂಲ ವಾಗಿದ್ದರೂ ದೊಡ್ಡ ಭೂಮಾಲೀಕರಿಗೆ ಹೆಚ್ಚಿನ ಬೆಲೆ ತೆರುವಂತಿತ್ತು.

ಅರಸು ಅವರು ರೈತ ವರ್ಗಕ್ಕೆ ಬೆಂಬಲವಾಗಿ ನಿಂತು ಶತ-ಶತಮಾನಗಳ ಶೋಷಣೆ ಮತ್ತು ಅಸಮಾನತೆಯನ್ನು ತೊಡೆದು ಹಾಕಿ ಕ್ರಾಂತಿಕಾರಿಯಾದರು. ಮುಂದುವರಿದ ಪ್ರಬಲ ವರ್ಗದವರಿಂದ ತುಳಿಯಲ್ಪಟ್ಟ "ದೀನ-ದಲಿತರು, ಹಿಂದುಳಿದ ವರ್ಗದವರು ಮತ್ತು ಅಲ್ಪಸಂಖ್ಯಾತರನ್ನು ಸಾಮಾಜಿಕವಾಗಿ ಮೇಲಕ್ಕೆತ್ತಬೇಕು, ಅವರ ಅಭ್ಯುದಯ ಸಾಧಿಸಬೇಕು" ಎಂದು ಕನಸು ಕಂಡ ಕರ್ನಾಟಕದ ಮುಖ್ಯಮಂತ್ರಿಗಳಲ್ಲಿ ಅರಸು ಅವರೇ ಪ್ರಮುಖರು ಎಂದರೆ ತಪ್ಪಾಗಲಿಕ್ಕಿಲ್ಲ. ನಮ್ಮ ಭಾರತೀಯ ಸಮಾಜದಲ್ಲಿ "ಭೂಮಿ" ಎಂಬುದು ಪ್ರತಿಷ್ಠೆಯ ಸಂಕೇತ. ಹೀಗಾಗಿ ಭೂಮಾಲೀಕರು ಇನ್ನಷ್ಟು ಭೂಮಿ ಬಯಸುತ್ತಿದ್ದುದೇ ಹೆಚ್ಚು. ಭೂಮಾಲೀಕರ ಶೋಷಣೆಯಿಂದ ಗೇಣಿದಾರನನ್ನು ರಕ್ಷಿಸಬೇಕಾಗಿತ್ತು. ಆದ್ದರಿಂದ "ಸರ್ವರಿಗೆ ಸಮಬಾಳು, ಸರ್ವರಿಗೆ ಸಮಪಾಲು" ಎಂಬ ಸಮಾಜವಾದಿ ಸಿದ್ಧಾಂತದಲ್ಲಿ ಅಪಾರ ನಂಬಿಕೆ, ಶ್ರದ್ಧೆ ಇಟ್ಟಿದ್ದ ಅರಸುರವರು "ಉಳುವವನೇ ಹೊಲದೊಡೆಯ"ನೆಂದು[5] ಸಾರಿದರು. ಬಡಜನರಿಗೆ ಭೂಮಿ ಹಂಚುವ ಕಾರ್ಯ ಕೈಗೊಂಡು ಭೂಸುಧಾರಣೆ ಕಾನೂನಿನಡಿ ಪ್ರತಿ ತಾಲೂಕಿಗೊಂದರಂತೆ ಜನತಾ ಪ್ರತಿನಿಧಿಗಳ ಸಮೇತ ಭೂ ನ್ಯಾಯಮಂಡಳಿಯನ್ನು ಸ್ಥಾಪಿಸಿದರು. ಗೇಣಿಗಾರಿಕೆಯ ಹಕ್ಕನ್ನು ನಿಜವಾಗಿಯೂ ಭೂಮಿ ಉಳುಮೆ ಮಾಡುವ ರೈತನಿಗೆ ಕೊಡಿಸಿಕೊಟ್ಟರು. ವಕೀಲರ ಪ್ರವೇಶದಿಂದ ಕಾನೂನಿನ ತಾಂತ್ರಿಕ ಕಾರಣ ಮುಂದೊಡ್ಡಿ ಶೀಘ್ರ ನ್ಯಾಯ ನೀಡಿಕೆಯಲ್ಲಿ ಕಾಲ ವಿಳಂಬ ವಾಗಬಾರದೆಂದು, ಪಟ್ಟಭದ್ರ ಹಿತಾಸಕ್ತಿಗಳ ಕೈ ಮೇಲಾಗಬಾರದೆಂಬ ಸದುದ್ದೇಶದಿಂದ ಭೂ ನ್ಯಾಯ ಮಂಡಳಿಗಳಲ್ಲಿ ವಕೀಲರು ಮಧ್ಯ ಪ್ರವೇಶಿಸುವುದನ್ನು ನಿರ್ಬಂಧಿಸಿದರು. ಇದು ಅವರ ರಾಜಕೀಯ ದೂರದೃಷ್ಟಿಗೆ, ದೀನ-ದಲಿತರ, ಹಿಂದುಳಿದವರ ಬಗೆಗೆ ಇದ್ದ ಕಳಕಳಿಗೆ ಸಾಕ್ಷಿಯಾಗಿದೆ. ಇಂಥ ಅನೇಕ ವಿಚಾರಗಳು ಅರಸರ ಹಾಗೂ ಅವರ ಕಾರ್ಯ ವೈಖರಿಯನ್ನು ಸಮಾಜದಲ್ಲಿದ್ದ ಹುಳುಕುಗಳನ್ನು ಸ್ಪಷ್ಟವಾಗಿ ಅನಾವರಣಗೊಳಿಸಿದ್ದವು. ಆದರೆ ಈ ಭೂಸೂಧಾರಣೆ ಕಾಯ್ದೆಯಿಂದ ಭೂಹೀನರಿಗೆ ಯಾವುದೇ ಲಾಭಾಂಶ ಆಗಲಿಲ್ಲ. ಅಲ್ಲದೆ ಅರಸರು ಈ ಕಾಯ್ದೆಯನ್ನು ಜಾರಿಗೆ ತರುವ ಅಭೀಕ್ಷೆ ಇದಾಗಿತ್ತೋ ಇಲ್ಲವೋ ಎಂದು ಹೇಳುವುದು ಸಹ ಕಷ್ಟವಾಗಿದೆ. ಆದರೆ ಮೊದಲನೆ ಹಂತವಾಗಿ ಉದಾರವಾದಿ ಯೋಜನಾಕ್ರಮ ಕೈಗೊಂಡರು ಎಂದು ಮಾತ್ರ ಹೇಳಬಹುದು. ಗ್ರಾಮೀಣ-ಹಿಂದುಳಿದ-ಅಲ್ಪಸಂಖ್ಯಾತರ ವರ್ಗಗಳಲ್ಲಿ ಸಾಮಾಜಿಕ, ರಾಜಕೀಯ ಜಾಗೃತಿ ಉಂಟುಮಾಡಲು ಹಾಕಿಕೊಂಡ ಕ್ರಮುಗಳಲ್ಲೊಂದು ಈ ಭೂಸುಧಾರಣ ಕಾಯ್ದೆ ಎಂದರೂ ತಪ್ಪಾಗಲಾರದೇನೋ. ಆದರೆ ಭೂಹೀನರಾದ ದಲಿತ ವರ್ಗಗಳಿಗೆ ಈ ಸುಧಾರಣೆಗಳಿಂದ ಯಾವುದೇ ರೀತಿಯ ಪ್ರಯೋಜನವಾಗಲಿಲ್ಲ.

ರಾಜ್ಯದಲ್ಲಿ ಸುಮಾರು ೩೦ ಲಕ್ಷದಷ್ಟು (೧೯೭೧ರ ಜನಗಣತಿಯ ಪ್ರಕಾರ) ಭೂಹೀನ ಕುಟುಂಬಗಳಿದ್ದು ಇವರಲ್ಲಿ ಕೇವಲ ಶೇ.೦.೩ರಷ್ಟು ಭೂಹೀನರಿಗೆ ಮಾತ್ರ ಭೂಮಿ ದೊರತಿದೆಯೆಂದರೆ ಈ ಕಾಯ್ದೆ ಜಾರಿಗೆ ತಂದುದರ ಒಳನೋಟವೇನು ಮತ್ತು ಎಷ್ಟರಮಟ್ಟಿಗೆ ಉಪಯುಕ್ತವಾಗಿದೆ ಎನ್ನುವುದನ್ನು ಊಹಿಸಬಹುದು.

೧೯೪೭ ರಿಂದಲೂ ಕರ್ನಾಟಕದಲ್ಲಿ ರಾಜಕೀಯ ಪ್ರಭುತ್ವವನ್ನು ಪಡೆದಿದ್ದ ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗ ಹಿಡಿತವನ್ನು ಸಡಿಸಲು ಈ ಕ್ರಮಕೈಗೊಂಡರೆಂದು ಹೇಳಬಹುದು. ಆದರೆ ಸಂಪೂರ್ಣವಾಗಿ ಈ ಕೋಮುಗಳ ವಿರುದ್ಧ ಕ್ರಮಕೈಗೊಂಡರೆಂದು ಹೇಳುವುದು ಸಮಂಜಸವಾದುದಲ್ಲ. ಏಕೆಂದರೆ ಇಬ್ಬಗೆಯ ನೀತಿಯಲ್ಲಿ ಅರಸು ಅವರು ಪಳಗಿದವರು. ವಿರೋಧಿಗಳ ಬಲಹೀನತೆಯನ್ನು ಅರಿತು ಆಘಾತ ನೀಡುವ ರಾಜಕೀಯ ಜಾಣರೂ ಕೂಡ. ಒಮ್ಮೆಲೆ ಮೇಲ್ವರ್ಗದ ಕೋಮುಗಳ ಮುಖಂಡರನ್ನು ಎದುರು ಹಾಕಿಕೊಳ್ಳುವುದು ಅರಸುರವರಿಗೆ ಸರಿಕಾಣಲಿಲ್ಲ. ಆದ್ದರಿಂದ ಜಾತಿ-ಜಾತಿಗಳ ನಡುವೆ ಒಡಕುಂಟು ಮಾಡಲು ಪ್ರಯತ್ನಿಸಿ ಸಫಲರಾದರು. ಅಂದರೆ ಪಟ್ಟಣವಾಸಿ (ಲಿಂಗಾಯತ) ಮತ್ತು ವ್ಯಾಪಾರಿ ವೀರಶೈವರನ್ನು ಕೃಷಿಗಾಯಿಗಳಾದ ಗ್ರಾಮೀಣ ವೀರಶೈವರಿಂದ ಬೇರ್ಪಡಿಸಿದ ಚಾಕಚಕ್ಯತೆ ಅವರದು.

ವೀರಶೈವರಲ್ಲೂ ಆರ್ಥಿಕವಾಗಿ ಹಿಂದುಳಿದವರಿಗೆ ಹಾವನೂರು ವರದಿಯ ಮೂಲಕ ಕೆಲವು ಸೌಲಭ್ಯಗಳನ್ನು ಘೋಷಿಸಿ, ಭೂಮಾಲೀಕರ ಹಾಗೂ ಅನುಕೂಲಸ್ಥ ವೀರಶೈವರಿಂದ ದೂರಕ್ಕೆ ಸರಿಸಿದರು. ಈ ಸುಧಾರಣಾ ಕಾಯ್ದೆಯು ಮೇಲ್ವರ್ಗದ ಕೋಮುಗಳ ಭೂಮಾಲೀಕರಿಗೆ ಸಾಕಷ್ಟು ನೋವನ್ನುಂಟು ಮಾಡಿತು. ಈ ಭೂಸುಧಾರಣೆಯಲ್ಲಿ ಮಾತ್ರ ನಾವು ಸ್ವಲ್ಪಮಟ್ಟಿನ ವರ್ಗ ಸಂಘರ್ಷದ ಅಂಶವನ್ನು ಕಾಣಬಹುದೇನೋ, ಆದರೆ ಇದು ಅನುದ್ದೇಶವಾಗುತ್ತದೆ. ಈ ಸುಧಾರಣೆಯಿಂದ ಹೆಚ್ಚು ಪ್ರಯೋಜನ ಪಡೆದವರು ಸಣ್ಣಹಿಡುವಳಿದಾರರು ಮತ್ತು ರಾಜಕಾರಣಿಗಳ ಹಿಂಬಾಲಕರು ಮಾತ್ರ. ಆದರೂ ಭೂಒಡೆತನದ ಸ್ವರೂಪದ ಮೇಲೆ ಈ ಕಾಯ್ದೆಯು ಸ್ವಲ್ಪಮಟ್ಟಿನ ಪ್ರಭಾವ ಬೀರಿತೆನ್ನಬಹುದು.

### ೪.೨. ಅರಸು ಅವರ ಭೂಸುಧಾರಣೆ ಕಾಯ್ದೆಯ ಉದ್ದೇಶಗಳು

ಭೂಸುಧಾರಣಾ ಶಾಸನದ ಉದ್ದೇಶಗಳು ಅರಸು ಅವರ ದೃಷ್ಟಿಯಲ್ಲಿ ಬಹಳ ಮುಖ್ಯವಾಗಿದ್ದವು.

೧. ಜಮೀನ್ದಾರಿ ಪದ್ಧತಿಯನ್ನು ಹೋಗಲಾಡಿಸುವುದು.

೨. ಜೀತಪದ್ಧತಿಯನ್ನು ನಿರ್ಮೂಲನೆ ಮಾಡುವುದು.

೩. ಕೃಷಿ ಉತ್ಪಾದನೆಯನ್ನು ಹೆಚ್ಚಿಸುವುದು.

೪. ಭೂಮಿ ಇಲ್ಲದವರಿಗೆ ಭೂಮಿಯನ್ನು ಹಂಚುವುದು.

೫. ಬಂಡವಾಳಶಾಹಿತ್ವವನ್ನು ತಡೆಗಟ್ಟುವುದು.

೬. ಆರ್ಥಿಕ ಸಮಾನತೆಯನ್ನು ತರುವುದು.

೭. ಉದ್ಯೋಗಗಳ ಸೃಷ್ಟಿ ಮತ್ತು ನಿರುದ್ಯೋಗ ಸಮಸ್ಯೆಯನ್ನು ನಿವಾರಿಸುವುದು.

ಈ ರೀತಿಯ ಭೂಸಂಬಂಧಿ ಸುಧಾರಣೆಗಳನ್ನು ಮಾಡಲು ಅರಸುರವರಿಗೆ ಸಾಹಿತ್ಯಕ ಪ್ರೇರಣೆ ಇದ್ದುದು ತಿಳಿಯುತ್ತದೆ. "ಚೋಮನದುಡಿ ಕಾದಂಬರಿಯು ತಮಗೆ ಭೂಸುಧಾರಣೆಯಲ್ಲಿ ತೊಡಗಿಸಿ ಕೊಳ್ಳುವುದಕ್ಕೆ ಪ್ರೇರಣೆ ನೀಡಿತ್ತೆಂದು, ದೇವರಾಜ ಅರಸುರವರು ಒಂದು ಸಂದರ್ಭದಲ್ಲಿ ಅಭಿಪ್ರಾಯ ಪಟ್ಟಿದ್ದರೆಂದು ಸಿ.ಎನ್. ರಾಮಚಂದ್ರನ್ (ಸುಧಾ ವಾರಪತ್ರಿಕೆ, ಪುಟ. ೧೭,೧೮, ಡಿಸೆಂಬರ್, ೨೦೦೩) ಉಲ್ಲೇಖಿಸಿದ್ದಾರೆ."[೪]

೧೯೭೩ರಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಏರ್ಪಡಿಸಿದ್ದ 'ಭೂಸುಧಾರಣೆ'ಗಳು ಎಂಬ ವಿಚಾರಗೋಷ್ಠಿಯಲ್ಲಿ ಅರಸು ಅವರು ಪ್ರತಿಪಾದಿಸಿದ ವಿಚಾರಗಳು ಹೀಗಿವೆ. ಅವರು-

> "ಭೂಸುಧಾರಣೆಯ ಸಮಸ್ಯೆ ದೇಶದ ಅತ್ಯಂತ ವಿವಾದಾತ್ಮಕ ಸಮಸ್ಯೆ. ಇದು ಬಹುಮುಖ್ಯವಾಗಿದೆ. ಏಕೆಂದರೆ ಕೂಡಲೆ ದೇಶದ ಸಮಗ್ರ ಆರ್ಥಿಕ ವ್ಯವಸ್ಥೆ, ದೇಶದ ಅಭಿವೃದ್ಧಿಗೆ ಕೂಡಲೇ ಗಮನಿಸಬೇಕಾದ ಇಷ್ಟೊಂದು ಆರ್ಥಿಕ ಸಮಸ್ಯೆಗಳ ಪರಿಹಾರವು ಈ ಭೂಸಮಸ್ಯೆಯನ್ನು ಪರಿಹರಿಸುವುದರ ಮೇಲೆಯೇ ಅವಲಂಬಿಸಿದೆ. ಏಕೆಂದರೆ ನಮ್ಮ ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇ. ೭೦ಕ್ಕಿಂತ ಹೆಚ್ಚಿನವರು ಭೂಮಿಯನ್ನು ಅವಲಂಬಿಸಿಯೇ ಬದುಕುತ್ತಿದ್ದಾರೆ."[೫]

- ಎನ್ನುವುದರ ಮೂಲಕ ಸಮಸ್ಯೆಯ ಆಳ ಮತ್ತು ಅದರ ಆಯಾಮವನ್ನು ವಿವರಿಸಿದರು. ಅಂತೆಯೇ ಅವರು "ಭೂಮಿಯು ಮನುಷ್ಯನಿಂದ ಸೃಷ್ಟಿಯಾದುದ್ದೇನೂ ಅಲ್ಲ. ನಾವು ಸಮಾಜವನ್ನು ಯಾವ ರೀತಿ ಬೆಳೆಸಿದ್ದೇವೆ ಎಂದರೆ ನಾವಾಗಿಯೇ ಭೂಮಿಯನ್ನು ನಮ್ಮದನ್ನಾಗಿ ಮಾಡಿಕೊಂಡಿದ್ದೇವೆ ಹಾಗೂ ಅದನ್ನು ಸ್ವಂತ ಜಮೀನು ಎಂದು ಕರೆದುಕೊಂಡಿದ್ದೇವೆ" ಎಂದು ಅವರು ತಿಳಿಸಿ ಹೇಳಲು ಪ್ರಯತ್ನಪಟ್ಟರು. ಭೂಮಿಯು ಸಣ್ಣ-ಸಣ್ಣ ಘಟಕಗಳಲ್ಲಿ ಹಂಚಿಹೋದರೆ ಉತ್ಪನ್ನವು ಹೆಚ್ಚಾಗುತ್ತದೆ ಎಂಬ ಅಂಶವನ್ನು ಅಧ್ಯಯನಗಳ ಆಧಾರದ ಮೇಲೆ ಅರಸುರವರು ಮಂಡಿಸಿದರು.

ಭೂಸುಧಾರಣೆಯ ಹಿಂದಿನ ತತ್ವ ಮತ್ತು ಉದ್ದೇಶಗಳನ್ನು ಬಿಡಿ-ಬಿಡಿಸಿ ಹೇಳುತ್ತಿದ್ದ ಅರಸು, ಹೀಗೆ ಹೇಳುವಲ್ಲಿ ಅವರು ಜನರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವ, ಒಟ್ಟಾರೆ ನಾಡಿನ ಅಭಿವೃದ್ಧಿಯ ಕಳಕಳಿ ವ್ಯಕ್ತವಾದದ್ದನ್ನು ನಾವು ಅವರ ಕಾರ್ಯವೈಖರಿಯುದ್ದಕ್ಕೂ ಕಾಣುತ್ತೇವೆ. ಅವರು ಹೇಳಿದ ಮಾತುಗಳು ಇಂದಿಗೂ ನಮಗೆ ಪ್ರಸ್ತುತವಾಗಿವೆ. ಉದಾಹರಣೆಗೆ-

> "ಒಂದು ವೇಳೆ ನಾವು ಈ ಸುಧಾರಣೆಯನ್ನು ಸರಿಯಾಗಿ ಅನುಷ್ಠಾನಗೊಳಿಸದಿದ್ದರೆ ಕೆಲಕಾಲ ನಂತರದಲ್ಲಿ ಇದಕ್ಕಿಂತಲೂ ಹೆಚ್ಚು ತೀವ್ರತರವಾದ ಸುಧಾರಣೆಯ ಕ್ರಮಗಳನ್ನು ಕುರಿತು ನಾವು ಪರ್ಯಾಲೋಚಿಸಬೇಕಾಗುತ್ತದೆ"[೬]

- ಎಂದು ಹೇಳಿ ಸಮಸ್ಯೆಗಳ ಪರಿಹಾರಕ್ಕೆ ಎಚ್ಚರಿಕೆಯ ಕರೆ ನೀಡಿದರು. ಮುಂದೆ ಈ ಕಾಯ್ದೆ ೧೯೭೪ರಲ್ಲಿ ತಿದ್ದುಪಡಿಗೊಂಡದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಒಟ್ಟಾರೆಯಾಗಿ ಈ ಭೂಸುಧಾರಣಾ ಶಾಸನವು ಸಾಮಾಜಿಕ ವ್ಯವಸ್ಥೆಯನ್ನೇ ಒಮ್ಮೆ ಅಲುಗಿಸಿತು. ಭೂಮಾಲೀಕರ ಆಜ್ಞಾವರ್ತಿಗಳಾಗಿ ಯಜಮಾನ ಸಂಸ್ಕೃತಿಗೆ ತಲೆಬಾಗಿ ಬದುಕಿ ಬಂದಿದ್ದ

ಗೇಣಿದಾರ ಜನರು ಸೆಟೆದುನಿಂತು ತಮ್ಮ ಉಳುಮೆಯ ಭೂಮಿ ಒಡೆತನ ಪಡೆಯಲು ಅವಕಾಶವಾಯಿತು. ಇದು ಗೇಣಿದಾರರಿಗೆ ಸ್ವತಂತ್ರ ಬದುಕಿನ ಆಸರೆಯನ್ನೊದಗಿಸುವ, ಆರ್ಥಿಕ ಕ್ರಮ ಮಾತ್ರವಾಗಿರದೇ ಜೊತೆಗೆ ಸಾಮಾಜಿಕ ಬಂಧನಗಳಿಂದಲೂ ಅವರನ್ನು ಬಿಡುಗಡೆಗೊಳಿಸಿದ ಸಾಮಾಜಿಕ ಕ್ರಾಂತಿಯೂ ಆಗಿತ್ತು.

ಭೂ ಶಾಸನ ಜಾರಿಗೆ ಬಂದ ಎರಡು ವರ್ಷಗಳ ಅವಧಿಯಲ್ಲಿ ಭೂ ಪಂಚಾಯಿತಿಗಳು ನಿಯತ್ತಿನಿಂದ ಕೆಲಸಮಾಡಿದವು. ಸುಮಾರು ೧೫ ಲಕ್ಷ ಗೇಣಿದಾರರ ಕುಟುಂಬಗಳು ಅವರ ಉಳುಮೆಯ ಜಮೀನಿನ ಒಡೆತನ ನೀಡಿದವು. ಅರಸು ಕಲ್ಪನೆಯ ಜನತಾ ನ್ಯಾಯಾಲಯ ಉದ್ದೇಶ ಈಡೇರಿಕೆಯಲ್ಲಿ ಸಫಲವಾಯಿತು. ಕಲುಷಿತ ಸಾಮಾಜಿಕ ವ್ಯವಸ್ಥೆಯಲ್ಲಿ ಜನತಾ ನ್ಯಾಯಾಲಯ ಕಲ್ಪನೆ ಹೀಗೆ ಯಶಸ್ವಿಯಾಗಿ ಕೆಲಸಮಾಡಿದ್ದು ಒಂದು ಪವಾಡವೇ ಸರಿ. ಸಾಮಾಜಿಕ ದುರ್ಬಲರ ಬದುಕಿಗೆ ಭೂಸುಧಾರಣಾ ಶಾಸನಗಳ ಮೂಲಕ ಸ್ವಂತಿಕೆಯ ನೆಲ ಒದಗಿಸಿದ್ದ ಅರಸು ಸಮಾಜದಲ್ಲಿ ಪ್ರತಿಷ್ಠಿತರ ಕೆಂಗಣ್ಣಿಗೆ ಗುರಿಯಾದರು. ಇದರಿಂದ ಭೂಒಡೆತನವನ್ನು ಕಳೆದುಕೊಂಡ ಸಾವಿರಾರು ಕುಟುಂಬಗಳು ಅರಸುರವರನ್ನು ಮನಸಾರೆ ಶಪಿಸಿದರು. ರಾಜಕೀಯವಾಗಿ ಪ್ರಜ್ಞಾವಂತರಾದ ಈ ಜನರು ಅರಸರ ವಿರುದ್ಧ ಪ್ರಚಾರದ ಸಮರವನ್ನೇ ಸಾರಿದರು.

ಭೂ ಪಂಚಾಯಿತಿಗಳೆನ್ನುವ ಜನತಾ ನ್ಯಾಯಾಲಯಗಳಿಗೆ ಸಮಾಜದಲ್ಲಿ ಪ್ರತಿಷ್ಠರೆನಿಸಿದ್ದ ಅನಾಮಧೇಯರನ್ನು ಹುಡುಕಿ ನೇಮಕ ಮಾಡಿದ ಅರಸು ಅವರ ಕ್ರಮ ಪ್ರಜ್ಞಾವಂತ ಜನರನ್ನು ಇನ್ನಷ್ಟು ಕೆರಳಿಸಿತು. ಆಗ ಅರಸು ಮಾಡಿದ್ದು ಈ ದೇಶದಲ್ಲಿ ರಾಜಕಾರಣಿಗಳು ಮೊದಲಿನಿಂದಲೂ ಪ್ರಯತ್ನಿಸುತ್ತಲೆ ಬಂದಿದ್ದ ತತ್ವಗಳನ್ನು ಆಚರಣೆಗೆ ತಂದದ್ದು ಎಂಬುದನ್ನು ಹೇಳುವ ಜನರೂ ಇರಲಿಲ್ಲ. ಅರಸು ಎತ್ತಿಕಟ್ಟಿದ ದುರ್ಬಲ ವರ್ಗಗಳ ಶಾಸಕರು ತಮ್ಮ ವೈಯಕ್ತಿಕ ಸುಖ-ಸವಲತ್ತುಗಳ ಬಗ್ಗೆ ಕೊಟ್ಟಷ್ಟು ಗಮನವನ್ನು ಅರಸು ಬೆಳೆಸಲು ಬಯಸಿದ್ದ ದುರ್ಬಲವರ್ಗಗಳ ರಾಜಕೀಯ ಶಕ್ತಿಯ ಕಡೆಗೆ ಗಮನ ನೀಡಲಿಲ್ಲ. ಸಾಮಾಜಿಕ, ಆರ್ಥಿಕ ವ್ಯವಸ್ಥೆಯನ್ನು ಅಲುಗಾಡಿಸಿ ಪರಿವರ್ತನೆಗೆ ದಾರಿ ಮಾಡುವ ಇದರ ಅರಸು ಕ್ರಮಗಳಿಗೆ ರಾಜಕೀಯವಾದ ಬಲನೀಡಲು ದುರ್ಬಲ ವರ್ಗಗಳ ಶಾಸಕರಿಂದ ಆಗಲಿಲ್ಲ. ಅರಸು ನಂಬಿದ್ದ ಪುರೋಗಾಮಿ ತತ್ವ, ವಿಚಾರಗಳನ್ನು ಅರ್ಥಮಾಡಿಕೊಳ್ಳುವ ಬುದ್ಧಿ ಬಲವಾಗಲಿ, ಮಾನಸಿಕ ಸಿದ್ಧತೆಯಾಗಲಿ ಆ ಶಾಸಕರಿಗೆ ಇರಲಿಲ್ಲ. ಎಲ್ಲರೊಟ್ಟಿಗೆ ತಮ್ಮದೂ ಒಂದು ಎನ್ನುವ ರೀತಿಯಲ್ಲಿ ಅವರು ಗುಲ್ಲೆಬ್ಬಿಸುತ್ತಿದ್ದರೇ ಹೊರತು ಬೇರೇನೂ ಅವರಿಂದ ಆಗಲಿಲ್ಲ. ದೇವರಾಜ ಅರಸು ನಾಯಕರಾಗಿದ್ದ ಆಗಿನ ಇಂದಿರಾ ಕಾಂಗ್ರೆಸ್‌ನ ಶಾಸಕಾಂಗ ಪಕ್ಷದ ೧೬೦ ಜನ ಶಾಸಕರಲ್ಲಿ ೧೦-೧೨ ಜನ ಶಾಸಕರು ಮಾತ್ರ ಪುರೋಗಾಮಿ ರಾಜಕೀಯ ತತ್ವಕ್ಕೆ ಬದ್ಧರಾಗಿದ್ದರು. ಅದರಲ್ಲಿಯೂ ಮಂತ್ರಿ ಪದವಿ ಅಥವಾ ಇತರ ಅಧಿಕಾರ ಸ್ಥಾನ ಲಭಿಸಿದ ಸಾಮಾಜಿಕ ದುರ್ಬಲರು, ವಿಲಾಸಪ್ರಿಯರು, ಸುಖಲೋಲುಪರು ಆದರು. ಹೀಗಾಗಿ ದುರ್ಬಲ ಜನಾಂಗದ ಶಾಸಕರು, ಅರಸು ಅವರಿಗೆ ರಾಜಕೀಯವಾಗಿ ಒಂದು ಹೊರೆಯೇ ಆದದ್ದು ಒಂದು ವಿಪರ್ಯಾಸವೇ ಸರಿ.

## ೪.೩. ಎಲ್.ಜಿ. ಹಾವನೂರ ಆಯೋಗದ ನೇಮಕ ಕುರಿತ ಚಿಂತನೆ

ಭಾರತದಲ್ಲಿ ದಲಿತರಿಗೆ, ಹಿಂದುಳಿದವರಿಗೆ ಶತಮಾನಗಳಿಂದಲೂ ಶಿಕ್ಷಣದಿಂದ ವಂಚಿತರನ್ನಾಗಿ ಮಾಡಿದ್ದಕ್ಕೆ, ಇಂದು ದೇಶ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದೆ. ಪ್ರಜಾಪ್ರಭುತ್ವ ರಾಷ್ಟ್ರವಾದ ಭಾರತದಲ್ಲಿ ಸರ್ಕಾರದ ಯಶಸ್ಸು ಅಲ್ಲಿನ ಎಲ್ಲಾ ಪ್ರಜೆಗಳು ಎಲ್ಲಾ ರಂಗದಲ್ಲಿಯೂ ಸಮಾನವಾಗಿ ಭಾಗವಹಿಸುವುದರ ಮೇಲೆ ಅವಲಂಬಿತವಾಗಿರುತ್ತದೆ. ದೇವರಾಜ ಅರಸು ಹಿಂದುಳಿದ ವರ್ಗಗಳ ಆಯೋಗದ ನೇಮಕ ಮಾಡುವುದರ ಮುಖಾಂತರ ಆ ವರ್ಗದ ಜನತೆಗೆ ಸಾಮಾಜಿಕ ನ್ಯಾಯವನ್ನು ಒದಗಿಸುವಲ್ಲಿ ಕಂಕಣಬದ್ಧರಾದರು.

ಅಧಿಕಾರಕ್ಕೆ ಬಂದ ಹೊಸತರಲ್ಲೆ ಅರಸು ಅವರು ವಿಧಾನಸಭೆಯಲ್ಲಿ ಹಿಂದುಳಿದ ವರ್ಗಗಳನ್ನು ನಿರ್ಧರಿಸುವಲ್ಲಿ ಹೊಸ ಮಾನದಂಡ ಬಳಸುವ ಬಗ್ಗೆ ಸೂಚನೆ ನೀಡಿದ್ದರು. "ನಾಗನಗೌಡ ಸಮಿತಿಯು ದೋಷದಿಂದ ಕೂಡಿದೆ ಎಂದ ಅವರು, ಜಾತಿ ಮತ್ತು ಆದಾಯ ಎರಡನ್ನು ಮಾನದಂಡವನ್ನಾಗಿ ಬಳಸುವುದು ಸರಿ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು."[೬] ಅದರಂತೆ ಹಿಂದುಳಿದ ವರ್ಗಗಳ ನಿರ್ಧರಿಸುವಿಕೆಗೆ ಆಯೋಗವನ್ನು ವಕೀಲರೂ, ರಾಜಕಾರಣಿಯೂ ಮತ್ತು ಹಿಂದುಳಿದ ವರ್ಗಕ್ಕೆ ಸೇರಿದವರೂ ಆದ ಎಲ್.ಜಿ. ಹಾವನೂರು ಅವರ ಅಧ್ಯಕ್ಷತೆಯಲ್ಲಿ ಆಗಸ್ಟ್ ೮, ೧೯೭೨ರಲ್ಲಿ ನೇಮಕ ಮಾಡಿದರು. ಇದರಿಂದ ಅರಸು ಅವರು ಎರಡು ರಾಜಕೀಯ ಆಶಯಗಳನ್ನು ಈಡೇರಿಸಿಕೊಳ್ಳುವ ಹವಣಿಕೆ ಹೊಂದಿದ್ದರು ಎಂದು ಕಾಣುತ್ತದೆ. ಒಂದು, ಹಿಂದುಳಿದ ಜಾತಿಯವರನ್ನು ರಾಜಕೀಯವಾಗಿ ಸಂಘಟಿಸಿ ಅವರಿಗೆ ಸವಲತ್ತುಗಳನ್ನು ಒದಗಿಸುವುದು. ಎರಡು, ಅದುವರೆಗೂ ಇದ್ದ ಲಿಂಗಾಯತ ಮತ್ತು ಒಕ್ಕಲಿಗರ ಪ್ರಾಬಲ್ಯವನ್ನು ಮುರಿಯುವುದು. ಆ ಮೂಲಕ ೧೯೫೬ರಿಂದ ಜಾರಿಯಲ್ಲಿದ್ದ ಮೀಸಲಾತಿಯ ನೀತಿಯ ಪ್ರಯೋಜನ ಕೇವಲ ಪ್ರಬಲ ಜಾತಿಯವರಿಗೆ ಮಾತ್ರ ಲಭ್ಯವಾಗಿತ್ತು ಎನ್ನುವ ಭಾವನೆಯನ್ನು ಹಿಂದುಳಿದವರಲ್ಲಿ ಬೆಳೆಸುವಲ್ಲಿ ಅವರು ಸಾಕಷ್ಟು ಯಶಸ್ವಿಯಾದರು.

ಹಿಂದುಳಿದ ವರ್ಗದ ಆಯೋಗದ ರಚನೆಗೆ ಸಂಬಂಧಪಟ್ಟಂತೆ, ಮಂತ್ರಿಮಂಡಲದ ಸಭೆಯಲ್ಲಿ ತೀರ್ಮಾನ ಕೈಗೊಂಡರು. ಅದರಂತೆ ಏಳು ಜನ ಸದಸ್ಯರನ್ನು ಒಳಗೊಂಡ ಒಂದು ಆಯೋಗವನ್ನು ರಚಿಸಿ, ಅದರಲ್ಲೇ ಒಬ್ಬರನ್ನು ಅಧ್ಯಕ್ಷರನ್ನಾಗಿ ನೇಮಕಮಾಡಿದರು. ಆ ಮೂಲಕ ಹಿಂದುಳಿದ ವರ್ಗಗಳ ಸಮಸ್ಯೆಗಳನ್ನು ಪರಿಶೀಲಿಸುವಂತೆ ತೀರ್ಮಾನ ಕೈಗೊಳ್ಳಲಾಯಿತು. ಈ ಆಯೋಗದಲ್ಲಿ ಕೆಳಕಂಡವರು ಕಾರ್ಯನಿರ್ವಹಿಸಿದರು.

೧. ಎಲ್.ಜಿ. ಹಾವನೂರು - ಛೇರ್ಮನ್
೨. ವೈ. ರಾಮಚಂದ್ರ - ಸದಸ್ಯರು
೩. ಕೆ.ಆರ್.ಎಸ್. ನಾಯ್ಡು - ಸದಸ್ಯರು
೪. ಕೆ.ಎಮ್. ನಾಗಣ್ಣ - ಸದಸ್ಯರು
೫. ಎಸ್.ಆರ್. ಮಾನಶೆಟ್ಟಿ - ಸದಸ್ಯರು
೬. ಎನ್. ಧರ್ಮಸಿಂಗ್ - ಸದಸ್ಯರು
೭. ಪಿ.ಬಿ. ಹಜೀಬ್ - ಸದಸ್ಯರು

ಹಾವನೂರು ವರದಿಯು ನಾಲ್ಕು ಸಂಪುಟಗಳನ್ನೊಳಗೊಂಡ ಒಂದು ಬೃಹತ್ ಗಾತ್ರದ ವರದಿಯಾಗಿದೆ. ಪ್ರತಿ ತಾಲೂಕಿಗೊಂದರಂತೆ ಸುಮಾರು ಎರಡುನೂರು ಗ್ರಾಮಗಳನ್ನು ಮತ್ತು ನಗರಗಳನ್ನು ಸರ್ವೇಕ್ಷಣೆಗೆ ಆರಿಸಿಕೊಳ್ಳಲಾಯಿತು. ಆದರೆ ವಾಸ್ತವವಾಗಿ ಸರ್ವೇಕ್ಷಣೆ ಮಾಡಿದ್ದು ಒಂದುನೂರ ತೊಂಬತ್ತೂರು ಗ್ರಾಮಗಳು ಮತ್ತು ಒಂದುನೂರ ಎಂಬತ್ತೈದು ನಗರದ ಬ್ಲಾಕ್‌ಗಳು. ಈ ಪ್ರದೇಶಕ್ಕೆ ಸಂಬಂಧಿಸಿದಂತಹ ಜಾತಿ ಸಮುದಾಯದ ವಿವರಗಳು, ಸರ್ಕಾರಿ ನೌಕರಿಯಲ್ಲಿ ವಿವಿಧ ಜಾತಿಗಳ ಪ್ರಾತಿನಿಧ್ಯ, ಅವುಗಳ ಶೈಕ್ಷಣಿಕಮಟ್ಟ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನಗಳ ಬಗ್ಗೆ ವಿವರವಾಗಿ ಮಾಹಿತಿಯನ್ನು ಆಯೋಗವು ಸಂಗ್ರಹಿಸಿತು.

ಹಾವನೂರು ವರದಿಯ ಆಯೋಗವು ಹಿಂದುಳಿದ ವರ್ಗಗಳನ್ನು ಈ ಕೆಳಗಿನಂತೆ ವರ್ಗೀಕರಿಸಿತು.

೧. ಹಿಂದುಳಿದ ಗುಂಪುಗಳು → ಶೇ.೧೬ರಷ್ಟು ಮೀಸಲಾತಿಯನ್ನು ಒದಗಿಸಿತು

೨. ಹಿಂದುಳಿದ ಜಾತಿಗಳು → ಶೇ.೧೦ರಷ್ಟು ಮೀಸಲಾತಿಯನ್ನು ಒದಗಿಸಿತು

೩. ಹಿಂದುಳಿದ ಬುಡಕಟ್ಟುಗಳು → ಶೇ.೫ರಷ್ಟು ಮೀಸಲಾತಿಯನ್ನು ಒದಗಿಸಿತು

## ಆಯೋಗದ ಶಿಫಾರಸುಗಳು

೧. ಭಾರತೀಯ ಸಂವಿಧಾನದ ವಿಧಿ ೧೫(೪) ಹಾಗೂ ೧೬(೪)ರ ಪ್ರಕಾರ ಜಾತಿಗಳನ್ನು, ಸಮುದಾಯಗಳನ್ನು, ಬುಡಕಟ್ಟುಗಳನ್ನು ಹಿಂದುಳಿದ ಪಂಗಡಗಳೆಂದು ಪರಿಗಣಿಸಬೇಕು.

೨. ಹಿಂದುಳಿದ ವರ್ಗಗಳಲ್ಲಿ ಶೇ. ೩೨ರಷ್ಟು ಮೀಸಲಾತಿ ಕಲ್ಪಿಸಬೇಕು, ಈ ಮೀಸಲಾತಿ ಆಯ್ಕೆ ಹಾಗೂ ಬಡ್ತಿಗೆ ಅನ್ವಯಿಸಬೇಕು.

೩. ಹಿಂದುಳಿದ ನೇಮಕಕ್ಕೆ ಸಂಬಂಧಿಸಿದಂತೆ ಅವರ ಕನಿಷ್ಟ ವಯೋಮಿತಿಯನ್ನು ಇತರರಿಗಿಂತ ೫ ವರ್ಷ ಹೆಚ್ಚಿಸಬೇಕು.

೪. ಪ್ರತ್ಯೇಕ ಹಿಂದುಳಿದವರ್ಗದ ನಿರ್ದೇಶನಾಲಯ ರಚನೆಯಾಗಬೇಕು.

೫. ಹಿಂದುಳಿದವರ್ಗದ ಸಲಹಾ ಸಮಿತಿಯೊಂದು ಅಸ್ತಿತ್ವಕ್ಕೆ ಬರಬೇಕು.

೬. ಹಣಕಾಸಿನ ಸಂಸ್ಥೆಯೊಂದು ಈ ಜನಗಳ ಅಭಿವೃದ್ಧಿಗಾಗಿ ಸ್ಥಾಪಿಸಬೇಕು.

೭. ಶುಲ್ಕ, ರಿಯಾಯಿತಿ, ವಿದ್ಯಾರ್ಥಿ ವಸತಿನಿಲಯ ಸೌಲಭ್ಯ ಹಾಗೂ. ವಿದ್ಯಾರ್ಥಿ ವೇತನಗಳು ದೊರೆಯಬೇಕು.

ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳಿಗೆ ಹಾವನೂರು ವರದಿ ಮಹತ್ವದ ಫಲಗಳನ್ನು ದೊರಕಿಸಿಕೊಟ್ಟಿತು. ಅವು -

೧. ಹಿಂದುಳಿದ ವರ್ಗಗಳ ಜನರಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ಪ್ರಜ್ಞೆಯನ್ನುಂಟು ಮಾಡಿತು.

೨. ಕರ್ನಾಟಕದಲ್ಲಿ ಉನ್ನತ ಜಾತಿಗಳಿಂದ ಶೋಷಿತರಾದ ದೀನ-ದಲಿತರ, ಹಿಂದುಳಿದ ವರ್ಗಗಳ ಜನರಿಗೆ ಸಾಮಾಜಿಕ ನ್ಯಾಯ ಒದಗಿಸಿತು.

೩. ಸಂಘ-ಸಂಸ್ಥೆಗಳು ಸ್ಥಾಪನೆಗೊಂಡ ಹಿಂದುಳಿದ ವರ್ಗಗಳ ಜನತೆ ತಮ್ಮ ಹಕ್ಕುಗಳಿಗಾಗಿ ಹೋರಾಟ ಪ್ರಾರಂಭಿಸಿದರು.

೪. ೧೯೭೦ರ ದಶಕದಲ್ಲಿ ಬಿಲ್ಲವ, ಕುರುಬ, ಕೊರವ, ಬೇಡ, ಉಪ್ಪಾರ, ಈಡಿಗ ಈ ಜನಾಂಗಗಳಲ್ಲಿ ರಾಜಕೀಯ ನಾಯಕರು ತಲೆ ಎತ್ತಿದರು.

೫. ವೃಂದ ನೇಮಕಾತಿ ಜಾರಿಗೆ ಬಂದಿತು.

ಈ ರೀತಿ ಹಾವನೂರು ಆಯೋಗವನ್ನು ನೇಮಿಸುವುದರೊಂದಿಗೆ ಹಿಂದುಳಿದ ವರ್ಗಗಳಿಗೆ ಸಾಮಾಜಿಕ ನ್ಯಾಯವನ್ನು ಒದಗಿಸಿಕೊಟ್ಟ ಅರಸು ಅವರನ್ನು "ಸಮಾಜದ ಕ್ರಾಂತಿಕಾರ" ಎಂದು ಕರೆಯಲಾಗುತ್ತದೆ. ಈ ಆಯೋಗದ ಶಿಫಾರಸ್ಸುಗಳನ್ನು ಅವರು ಜಾರಿಗೆ ತಂದುದ್ದಕ್ಕೆ ಸಂಪೂರ್ಣ ತೃಪ್ತಿ ವ್ಯಕ್ತಪಡಿಸಿದ್ದಾರೆ. ಈ ಒಂದು ಸಂದರ್ಭದಲ್ಲಿ ಅವರು ಮಾತನಾಡುತ್ತಾ-

> "ನನ್ನಿಂದ ಅಧಿಕಾರ ಹೋಗಬಹುದು. ನಾನು ಸಾಯಲುಬಹುದು. ಆದರೆ ಈ ಒಂದು ಸಣ್ಣ ಕೆಲಸ ಮಾತ್ರ ಹಿಂದುಳಿದ ವರ್ಗದ ಆಯೋಗದ ನೇಮಕ ನನ್ನಲ್ಲಿ ಅತೀವ ಸಂತೃಪ್ತಿ ಭಾವವನ್ನು ಮತ್ತು ನನ್ನ ಕೊನೆಯ ಆಸೆಯನ್ನು ಪೂರೈಸಿದೆ."[೬]

- ಎಂದು ನುಡಿದದ್ದುಂಟು.

೧೯೭೭ರಲ್ಲಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಾರ್ಪೊರೇಷನ್ ನೇಮಕವಾಗಿ ಈ ವರ್ಗಗಳ ಜನರಿಗೆ ಕಿರು ಉದ್ಯಮಗಳನ್ನು ಆರಂಭಿಸಲು ಸಾಲ ನೀಡುವ ವ್ಯವಸ್ಥೆ ಆರಂಭವಾಯಿತು. ೧೯೭೮ರಷ್ಟರ ಹೊತ್ತಿಗೆ ೨೦೫ ಜನ ಇದರಿಂದ ಲಾಭ ಪಡೆದಿದ್ದರು. ಇಂಥವರಿಗೆ ಕಾರ್ಪೊರೇಷನ್ ಶೇ. ೨೦ರಷ್ಟು ಮೂಲಬಂಡವಾಳ ನೀಡುತ್ತಿತ್ತು. ಒಟ್ಟಿನಲ್ಲಿ ಅರಸು ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳ ಆಯೋಗವನ್ನು ನೇಮಕ ಮಾಡುವುದರ ಮೂಲಕ ಈ ವರ್ಗದ ಜನರ ಮಕ್ಕಳಿಗೆ ಶಿಕ್ಷಣ ಮುಂದುವರಿಸಲು ಅನುಕೂಲವಾಗುವಂತೆ ಎಲ್ಲಾ ಕಡೆಗೂ ವಿದ್ಯಾರ್ಥಿನಿಲಯಗಳನ್ನು ಆರಂಭಿಸಲಾಯಿತು. ಒಟ್ಟಾರೆ ಈ ವರ್ಗದ ಜನರಿಗೆ ಸಾಮಾಜಿಕ ನ್ಯಾಯ ಮತ್ತು ರಾಜಕೀಯ ಜಾಗ್ರತೆಯನ್ನು ಮೂಡಿಸುವುದರೊಂದಿಗೆ, ಎಲ್ಲರು ಸಮಾನವಾಗಿ ಓಡಾಡುವುದಕ್ಕೆ ಕಾರಣರಾದವರು ದೇವರಾಜ ಅರಸರು ಎಂದರೆ ತಪ್ಪಾಗಲಾರದು. "ಎಲ್ಲಿವರೆಗೆ ಈ ಬಡಜನ, ಹಿಂದುಳಿದ ಜನ, ನಿಮ್ನವರ್ಗದ ಜನ, ಹರಿಜನ-ಗಿರಿಜನರಿಗೆ ನಾವು ಮಾಡುವ ಕೆಟ್ಟಕಾರ್ಯದಿಂದ ಒಳ್ಳೆಯದು ಆಗುತ್ತದೆಯೋ, ಅಲ್ಲಿಯವರೆಗೆ ಇಂಥ ಕಾರ್ಯ ಮಾಡಲು ನಾವು ಸಿದ್ಧ" ಎಂದು ಅರಸು ಅವರು ಹೇಳುತ್ತಿದ್ದರು.[೭]

### ೪.೪. ಬದುಕಿನ ಆಸರೆ ಕಲ್ಪಿಸಿದ ಜೀತ ವಿಮುಕ್ತಿ

ದೀನ-ದಲಿತ ಜನತೆಯ ಬಂಧ ವಿಮೋಚನೆಯ ತಮ್ಮ ಕಾಯಕದಲ್ಲಿ ಅರಸರು ಆಗಲೂ ವಿರಮಿಸಲಿಲ್ಲ. ಜೀವನಕ್ಕೆ ಸಾಕಷ್ಟು ಆದಾಯವಿಲ್ಲದ ಸಣ್ಣಪುಟ್ಟ ಹಿಡುವಳಿದಾರರು ಕೃಷಿಕಾರ್ಮಿಕರು, ಕುಂಬಾರರು, ಅಗಸರು, ಕಮ್ಮಾರರು, ಉಪ್ಪಾರರು ಮತ್ತಿತರ ಕಸುಬುದಾರ ಕುಟುಂಬಗಳು ಸಾಲದ ಶೂಲದಲ್ಲಿ ಸಿಕ್ಕಿವೆ ಎಂಬುದರ ಅರಿವು ಅವರಿಗಿತ್ತು. ಇಂತಹ ಬಡಜನರು ತಮ್ಮ ಬದುಕಿನ ಬಂಡಿಯನ್ನು ಸಾಗಿಸಲು ಊರಿನ ಶ್ರೀಮಂತರಿಂದ ಸಾಲ ಪಡೆದು ಇದ್ದಬದ್ದದ್ದನ್ನೆಲ ಅಡವು ಇಡುತ್ತಿದ್ದರು. ತುಂಡು ಜಮೀನು ಇದ್ದರೂ, ಅದನ್ನು ಒತ್ತೆಯಿಡುತ್ತಿದ್ದರು. ಹೀಗೆ ಶ್ರೀಮಂತರ ಹಂಗಿನಲ್ಲಿ ಬದುಕಿ ಬಂದಿರುವ ಬಡಜನರ ಸಾಲದ ಹೊರೆಯನ್ನು ಒಂದೇಟಿನಲ್ಲಿ ಇಳಿಸುವ

ತೀರ್ಮಾನಕ್ಕೆ ಅರಸುರವರು ಬಂದರು. ೧೯೭೫ರಲ್ಲಿ ಬಡಜನರು ಶ್ರೀಮಂತರಿಂದ ಪಡೆದಿದ್ದ ಎಲ್ಲಾ ಸಾಲವನ್ನು ಮನ್ನಾ ಮಾಡುವ ಶಾಸನವನ್ನು ಜಾರಿಗೆ ತಂದರು. ಇದನ್ನು "ಋಣಪರಿಹಾರ" ಕಾಯಿದೆ ಎಂತಲೂ ಕರೆದರು.

ಜಿಲ್ಲಾಧಿಕಾರಿಗಳ ಸಭೆ ಕರೆದು ಈ ಕಾಯ್ದೆಯ ಮೂಲ ಉದ್ದೇಶ ಮತ್ತು ಅದರ ಅನುಷ್ಠಾನದ ಬಗ್ಗೆ ನಿರ್ದೇಶನ ನೀಡಿದರು. ಶ್ರೀಮಂತ ಸಾಹುಕಾರರಲ್ಲಿನ ಒಡವೆಗಳನ್ನು ಪತ್ತೆ ಹಚ್ಚಿ ಸಾಲಗಾರರಿಗೆ ಹಿಂತಿರುಗಿಸುವ ಜವಾಬ್ದಾರಿಯನ್ನು ಜಿಲ್ಲಾಧಿಕಾರಿಗಳಿಗೆ ವಹಿಸಿದರು. ಮುಖ್ಯ ಮಂತ್ರಿಯ ನೇರ ಆದೇಶದಿಂದ ಉತ್ತೇಜಿತರಾದ ಜಿಲ್ಲಾಧಿಕಾರಿಗಳು ಕಾನೂನು ಜಾರಿಗಾಗಿ ಕ್ಷೇತ್ರಕ್ಕಿಳಿದರು. ಜಾರಿಗೆ ಬಂದ ಕೆಲವೆ ತಿಂಗಳಲ್ಲಿ ಕಾನೂನಿನ ಉದ್ದೇಶ ಈಡೇರಿತು. ಬಡಜನ 'ಗಿರಿವಿ' ಇಟ್ಟಿದ್ದ ಚಿನ್ನದಾಭರಣಗಳು ಮತ್ತಿತರ ಒಡವೆಗಳು ಮರಳಿ ಅವರ ಕೈಸೇರಿದವು. ಅರಸರ ಆಡಳಿತದಲ್ಲಿ ಜನ ಮರೆಯಲಾಗದ ದಾಖಲೆಯಿದು. ಈ ಋಣಪರಿಹಾರ ಕಾಯಿದೆಯ ಬೆನ್ನಲ್ಲೇ ಅರಸರು ಇನ್ನೊಂದು ವಿಮೋಚನಾ ಸಮರ ಸಾರಿದರು. ಅದು ಗ್ರಾಮಾಂತರ ಪ್ರದೇಶಗಳಲ್ಲಿ ಆಚರಣೆಯಲ್ಲಿದ್ದ "ಜೀತಪದ್ಧತಿ"ಯ ನಿಷೇಧಕ್ಕೆ ಸಂಬಂಧಪಟ್ಟದ್ದು.

ಭಾರತೀಯ ಸಮಾಜಕ್ಕೆ ಅಂಟಿಕೊಂಡು ಬಿದ್ದಿದ್ದ ಅನೇಕ ಸಾಮಾಜಿಕ ಜಾಡ್ಯಗಳಲ್ಲಿ ಜೀತಪದ್ಧತಿ ಬಹಳ ನಿಕೃಷ್ಟವಾದದ್ದು. ಪ್ರಾಣಿಗಳಂತೆ ಮನುಷ್ಯರ ಮಾರಾಟದಲ್ಲಿ ರೂಪಗೊಂಡಿದ್ದ ಗುಲಾಮಗಿರಿ, ಜೀತಪದ್ದತಿ ಹೀನಾಯವಾದದ್ದು. ಕಡುಬಡವರಾದ ಕೃಷಿ ಕಾರ್ಮಿಕರು ತಮ್ಮ ಹೊಟ್ಟೆ ತುಂಬಿಸಿಕೊಳ್ಳಲು ಅಥವಾ ಮಕ್ಕಳನ್ನು ಸಾಕಲು ಊರಿನ ಸಾಹುಕಾರರಿಂದ ೨೦೦-೩೦೦ ರೂಪಾಯಿಗಳಷ್ಟು ಸಾಲ ಪಡೆದು ಅದನ್ನು ತೀರಿಸಲು ಸಾಹುಕಾರನ ಮನೆಯಲ್ಲಿ ಒತ್ತೆಯಾಳಾಗಿ ದುಡಿಯುತ್ತಿದ್ದರು. ಸಾಲದ್ದಕ್ಕೆ ಒತ್ತೆಯಾಳಾಗಿ ಕೆಲಸ ಮಾಡುವವನಿಗೆ ವೇತನವೆಂಬುದಿರಲಿಲ್ಲ. ಜೀವನ ಪರ್ಯಂತ ಜೀತದಾಳಾಗಿ ಇರುವುದೇ ಅವನ ಪಾಡು. ಸಾಹುಕಾರನ ಮನೆಯ ಕೊಟ್ಟಿಗೆಯಲ್ಲಿ ವಾಸಮಾಡಿ ಮುಂದೆ ಎಸೆದ ಅನ್ನ ಅಥವಾ ಮುದ್ದೆಯನ್ನು ತಿಂದು ಜೀವ ಸವೆಸುವುದಕ್ಕೆ ಇಂಥ ಸಾಲಿಗನ ಗತಿ. ಜೀತದಾಳುವಿನ ತಂದೆ ಸತ್ತರೆ ಆತನ ಮಕ್ಕಳಲ್ಲಿ ಒಬ್ಬನನ್ನು ಜೀತಕ್ಕೆ ತೆಗೆದುಕೊಳ್ಳುವ ಅಮಾನುಷ ಸಂಪ್ರದಾಯವೂ ಜೀತಪದ್ದತಿಯಲ್ಲಿ ಅಡಕವಾಗಿತ್ತು. "ಈ ದುಡಿಮೆಗಾರರೆಲ್ಲರು ಒಂದು ವರ್ಷ ಕೈಕಟ್ಟಿಕುಳಿತರೆ ಇಡೀ ಸಮಾಜ ಸತ್ತು ಹೋಗುತ್ತದೆ. ಆದರೆ ಶೇ ೧೦ರಷ್ಟು ಇರುವ ಮೇಲ್ವರ್ಗದ ಜನ ಕೈಕಟ್ಟಿ ಕುಳಿತರೆ ಯಾವ ಅನಾಹುತವು ಆಗುವುದಿಲ್ಲ. ಆದ್ದರಿಂದ ದುಡಿಮೆಗಾರರ ವರ್ಗಕ್ಕೆ ಸಲ್ಲಬೇಕಾದ ಗೌರವ ಪ್ರತಿಫಲ ನೆಮ್ಮದಿಯನ್ನು ಒದಗಿಸಿಕೊಡದಿದ್ದರೆ ಸರ್ಕಾರಗಳು ಯಾತಕ್ಕಾದರೂ ಇರಬೇಕು"[೯] ಎಂದು ಅರಸು ಅವರು ಹೇಳಿದ್ದಾರೆ. ಇದರಿಂದ ದುಡಿಮೆಗಾರನ ಬಗೆಗಿದ್ದ ಕಳಕಳಿ ವ್ಯಕ್ತವಾಗುತ್ತದೆ. ಅದುವರೆಗೂ ಅಲಕ್ಷ ಮಾಡಲಾಗಿದ್ದ ಬಡ ಕೂಲಿಕಾರ್ಮಿಕರ, ಶೋಷಿತರ ಹಾಗೂ ಗ್ರಾಮೀಣ ಬಡಜನರ ಬದುಕಿಗೆ ಹೊಸ ಆಯಾಮ ನೀಡಿದ ಶ್ರೇಯಸ್ಸು ಅರಸು ಅವರದು. ಈ ಋಣಪರಿಹಾರ, ಜೀತಪದ್ದತಿಯ ನಿರ್ಮೂಲನೆಗಳ ಅನುಷ್ಠಾನದಲ್ಲಿ ಅರಸರಿಗೆ ಅವರ ಸಂಪುಟ ಸಹೋದ್ಯೋಗಿ ಕೆ.ಎಚ್. ರಂಗನಾಥರವರ ಪೂರ್ಣ ಸಹಯೋಗವಿತ್ತೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ದೇವರಾಜ ಅರಸು ಮುಖ್ಯಮಂತ್ರಿಯಾಗಿದ್ದ ಮೊದಲ ಅವಧಿ ೧೯೭೨ ಮಾರ್ಚ್ ೧೯೭೭ ಡಿಸೆಂಬರ್‌ನಲ್ಲಿ ಮಾಡಿದ ಬಹುತೇಕ ಶಾಸನಗಳು ಹಾಗೂ ಯೋಜನೆಗಳ ಮೂಲ ಉದ್ದೇಶ ಸಾಮಾಜಿಕ ಪರಿವರ್ತನೆಯಾಗಿತ್ತೆಂಬುದನ್ನು ಮರೆಯಲಾಗದು. ಅಲ್ಲಿಯವರೆಗೆ ಈ ರಾಜ್ಯವನ್ನಾಳಿದ ಯಾವ ಮುಖ್ಯಮಂತ್ರಿಯು ಈ ದಿಸೆಯಲ್ಲಿ ಯೋಚಿಸಿರಲಿಲ್ಲವೆಂಬುದನ್ನು ಗಮನಿಸಬೇಕಾಗಿದೆ. ಹಿಂದುಳಿದ ವರ್ಗಗಳಲ್ಲಿ ಉತ್ತಮ ಬದುಕಿನ ಆಸೆಯನ್ನು ಚಿಗುರಿಸುವ ಕೆಲಸದೊಂದಿಗೆ ಸಮಾಜದ ಎಲ್ಲಾ ವರ್ಗಗಳ ಹಿತವನ್ನು ಅವರು ಮರೆತಿರಲಿಲ್ಲ. ಜನರ ಎಲ್ಲಾ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ರಾಜ್ಯದ ಪೇಟೆ-ಪಟ್ಟಣಗಳಲ್ಲಿ ೧೯೭೩ರ ಮಳೆಗಾಲದಲ್ಲಿ ನಡೆದ “ಆಹಾರದಂಗೆ ಅಥವಾ ದರೋಡೆ” ಈ ರಾಜ್ಯದ ಇತಿಹಾಸದಲ್ಲಿ ಸರ್ಕಾರವೊಂದು ಎದುರಿಸಿದ ಘೋರ ಸಮಸ್ಯೆ. ತೀವ್ರತರವಾದ ಆಹಾರಧಾನ್ಯಗಳ ಅಭಾವ ಈ ದಂಗೆಗೆ ಮೂಲಕಾರಣವಾಗಿತ್ತು. ಅದರೊಂದಿಗೆ ಮಾಮೂಲಿ ರಾಜಕೀಯ ಸೇರಿಕೊಂಡು, ವಿದ್ಯಾವಂತ ನಿರುದ್ಯೋಗಿಯೊಬ್ಬರು ಅಂಗಡಿಗಳಿಗೆ ನುಗ್ಗಿ ಕೈಗೆ ಸಿಕ್ಕಿದ್ದನ್ನು ದೋಚಲಾರಂಭಿಸಿದರು. ಕಾನೂನು ವ್ಯವಸ್ಥಾಪಾಲನೆ ಅಸಾಧ್ಯವೆನ್ನುವಷ್ಟರ ಮಟ್ಟಿಗೆ ಪರಿಸ್ಥಿತಿ ಗಂಭೀರವಾಯಿತು. ಈ ಸಂದರ್ಭದಲ್ಲಿ ಹಸಿದ ಜನರ ದಂಗೆಯನ್ನು ಅರಸು ಬಹಳ ಜಾಣ್ಮೆಯಿಂದ ನಿಭಾಯಿಸಿದರು. ಅಧಿಕಾರ ದಂಡವನ್ನು ಅಡ್ಡಾದಿಡ್ಡಿ ಬಳಸಲಿಲ್ಲ. “ಇನ್ನೊಮ್ಮೆ ದಂಗೆ ಎದ್ದರೆ ಗುಂಡಿಟ್ಟು ಕೊಲ್ಲಲಾಗುವುದು” ಎಂಬ ಎಚ್ಚರಿಕೆಯೊಂದಿಗೆ ಜನರ ಮನೆ ಮನೆಗೆ ಕಾಳು ಬೇಳೆ ಪೂರೈಕೆ ಮಾಡಿದರು. ಹೀಗಾಗಿ ಕೆಲವೇ ದಿನಗಳಲ್ಲಿ ಈ ದಂಗೆ ಶಮನಗೊಂಡಿತು. ಈ ಕ್ಲಿಷ್ಟ ಸಮಸ್ಯೆಯನ್ನು ಎದುರಿಸುವಲ್ಲಿ ದೃಢ ನಿಲುವಿಗೆ ಸಂಯಮದ ಚೌಕಟ್ಟು ಕೊಟ್ಟು ಯಶಸ್ವಿಯಾದರು. ಇದರೊಂದಿಗೆ ವಿದ್ಯಾವಂತ ನಿರುದ್ಯೋಗಿಗಳ ಸಮಸ್ಯೆಯನ್ನು ಕೈಗೆತ್ತಿಕೊಂಡರು. ಉದ್ಯೋಗವಿಲ್ಲದೆ ಹತಾಶರಾಗಿ ಅಲೆಯುತ್ತಿದ್ದ ಯುವಕರಿಗೆ ತುಸು ನೆರವಾಗಬಲ್ಲ, ಒಂದು ಯೋಜನೆಯನ್ನು ತಯಾರಿಸಿದರು. ಅದೇ ‘ಸ್ಟೈಪಂಡರಿ ಯೋಜನೆ’ ಈ ಯೋಜನೆಯಿಂದ ಲಕ್ಷಾಂತರ ಯುವಕರು ನಿರಾಶೆಯ ಕಾರ್ಮೋಡದಲ್ಲಿ ಬೆಳ್ಳಿಗೆರೆ ಕಂಡಂತಾಯಿತು. ಶಿಕ್ಷಿತ ಉದ್ಯೋಗರಹಿತರಿಗೆ ದೇಶದಲ್ಲಿಯೇ ಅಪರೂಪದ ಈ ಯೋಜನೆಯನ್ನು ಪಶ್ಚಿಮಬಂಗಾಳ, ಕೇರಳದಂಥ ಪ್ರಗತಿಪರ ರಾಜ್ಯ ಸರಕಾರಗಳು ಅನುಸರಿಸಿದವು ಎನ್ನುವುದು ಅರಸು ಅವರ ರಾಜಕೀಯ ದೂರದೃಷ್ಟಿಗೆ ಒಂದು ಉದಾಹರಣೆ. ಜನರಿಗೆ ಅನುಕೂಲ ವಾಗುವಂತಹ ಕಾರ್ಯಕ್ರಮಗಳನ್ನು ಜಾರಿಗೆ ತರುವಲ್ಲಿ ಪಟ್ಟಭದ್ರ ಹಿತಾಸಕ್ತಿಗಳನ್ನು ಎದುರು ಹಾಕಿಕೊಳ್ಳಲು ಅವರು ಎಂದೂ ಹಿಂಜರಿಯುತ್ತಿರಲಿಲ್ಲ ಎನ್ನುವುದಕ್ಕೆ ಸರ್ಕಾರಿ ನೌಕರರ ನಿವೃತ್ತಿಯ ವಯಸ್ಸನ್ನು ೫೮ ವರ್ಷಗಳಿಂದ ೫೫ ವರ್ಷಗಳಿಗೆ ಇಳಿಸಿದ್ದೆ ಸಾಕ್ಷಿಯಾಗಿದೆ. ಅರಸರ ಈ ನಿರ್ಧಾರ ಸಹಜ ವಾಗಿಯೇ ಸರ್ಕಾರಿ ನೌಕರರಲ್ಲಿ ಅಸಮಾಧಾನ ಮೂಡಿಸಿತು. ಆದರೆ ರಾಜ್ಯದ ಅಸಂಖ್ಯಾತ ಯುವಕರು, ನಿರುದ್ಯೋಗಿಗಳು ಅರಸುರವರ ಈ ಕ್ರಮವನ್ನು ಶ್ಲಾಘಿಸಿದರು. ಇದರ ಜೊತೆಯಲ್ಲಿ ಇಪ್ಪತ್ತು ವರ್ಷ ಸೇವೆಸಲ್ಲಿಸಿದ ಸರ್ಕಾರಿ ನೌಕರರಿಗೆ ಸ್ವಂಯಂ ನಿವೃತ್ತಿ ಯೋಜನೆಯನ್ನು ಜಾರಿಗೊಳಿಸಿದರು. ಅರಸರ ಕಳಕಳಿ, ನಿರುದ್ಯೋಗಿ ಯುವಕರ ಬಗ್ಗೆ ಮಾತ್ರವಷ್ಟೇ ಅಲ್ಲ, ಪಾಶ್ಚಾತ್ಯದೇಶಗಳಲ್ಲಿ

ಇರುವಂತೆ ವೃದ್ಧರಿಗೆ ನೆರವಾಗುವ "ವೃದ್ಧಾಪ್ಯ ವೇತನ" ಯೋಜನೆಯನ್ನು ಜಾರಿಗೊಳಿಸಿದರು. ಅರಸು ಕೈಗೊಂಡ ಕಾರ್ಯಗಳಲ್ಲಿ ಇದು ಅತ್ಯಂತ ಮುಖ್ಯವಾದದ್ದಾಗಿದೆ. ಯಾವ ವ್ಯಕ್ತಿಗೆ ತನ್ನ ಜೀವನ ಸಾಗಿಸುವುದಕ್ಕೆ ದುಡಿಯಲು ಅಸಾಧ್ಯವೋ ಅಂತ ನಿರಾಶ್ರಿತರಿಗೆ, ಕಣ್ಣುಕಾಣಿಸದ, ಕಿವಿಕೇಳಿಸದ, ಅಂಗವಿಕಲರಿಗೆ ಮತ್ತು ಮಕ್ಕಳಿಲ್ಲದೆ ಇಳಿವಯಸ್ಸಿನಲ್ಲಿ ಸಾಧ್ಯವಿಲ್ಲದವರಿಗೆ ತಿಂಗಳಿಗೆ ೪೦ ರೂಪಾಯಿಗಳನ್ನು ಕೊಡುವಂತೆ ಶಾಸನ ಹೊರಡಿಸಿದರು. ಇದರಿಂದ ಲಕ್ಷಾಂತರ ವೃದ್ಧರು ಬದುಕಿನ ಕಡೆಯ ದಿನಗಳನ್ನು ಭರವಸೆಯಿಂದ ಕಳೆಯಲು ಸಹಾಯಕವಾಯಿತು. ಮುಂದೆ ಆಂಧ್ರದ ಎನ್.ಟಿ.ಆರ್. ಸರ್ಕಾರ ಈ ಯೋಜನೆಯನ್ನು ಅನುಸರಿಸಿದ್ದನ್ನೂ ನೆನಪಿಸಿಕೊಳ್ಳಬಹುದು.

### ೪.೫. ಬಡತನ ನಿರ್ಮೂಲನ ಚಿಂತನೆ

ಇಂದಿರಾಗಾಂಧಿಯವರ ಅನುಯಾಯಿಯಾಗಿ ಅವರ ಮಹತ್ವಾಕಾಂಕ್ಷೆಯ 'ಇಪ್ಪತ್ತು ಅಂಶಗಳ ಸೂತ್ರದ ಪ್ರಣಾಳಿಕೆ'ಯನ್ನು ಅನುಷ್ಠಾನಕ್ಕೆ ತಂದ ಕೀರ್ತಿ ದೇವರಾಜ ಅರಸು ಅವರಿಗೆ ಸಲ್ಲುತ್ತದೆ. ದೇಶದ ಹೆಚ್ಚಿನ ರಾಜ್ಯಗಳು ಕಾಂಗ್ರೆಸ್ ಸರ್ಕಾರದ ಆಡಳಿತದಲ್ಲಿದ್ದರೂ, ಇಪ್ಪತ್ತು ಅಂಶಗಳ ಪ್ರಣಾಳಿಕೆಯನ್ನು ಜಾರಿಗೆ ತರುವಲ್ಲಿ ಹಿಂದೇಟು ಹಾಕಿದ್ದವು. ಹೀಗಾಗಿ ಈ ಕೀರ್ತಿ ಕರ್ನಾಟಕ ರಾಜ್ಯ ಮತ್ತು ಆಗಿನ ಮುಖ್ಯಮಂತ್ರಿ ದೇವರಾಜ ಅರಸು ಅವರಿಗೆ ಸಲ್ಲುತ್ತದೆ. ಅರಸು ಅವರ ದಕ್ಷ ಆಡಳಿತ, ಭೂಸುಧಾರಣೆ ಮತ್ತು ಬಡತನದ ಬವಣೆಯಲ್ಲಿದ್ದವರನ್ನು ಮೇಲೆತ್ತುವಂಥ ಮಾತುಗಳೇ ಅವರಲ್ಲಿ ಕೇಳಿಬರುತ್ತಿದ್ದವು. ಇಂದಿರಾಗಾಂಧಿಯವರು ಪ್ರಧಾನಿಯಾಗಿದ್ದಾಗ ಅವರ ಗಮನಕ್ಕೂ ತಂದು ಈ ವಿಷಯವನ್ನು ಗಂಭೀರವಾಗಿ ಪರಿಗಣಿಸುವಂತೆ ಮಾಡಿ, ಸೂಕ್ತ ವಾತಾವರಣ ನಿರ್ಮಾಣ ಮಾಡಿದರು. ಆಶ್ಚರ್ಯವೆಂಬಂತೆ ೧೯೭೩ರ ನವೆಂಬರ್‌ನಲ್ಲಿ ಬೆಂಗಳೂರಿನಲ್ಲಿ ನಡೆದ ದಕ್ಷಿಣ ಭಾರತದ ಹಿಂದುಳಿದ ವರ್ಗ ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಅಲ್ಪಸಂಖ್ಯಾತರ ಸಮಾವೇಶದಲ್ಲಿಯೇ, ಪ್ರಧಾನಿ ಇಂದಿರಾಗಾಂಧಿಯವರು "ಗರೀಬಿ ಹಟಾವೋ" ಘೋಷಣೆ ಮಾಡಿದರು. ದೇವರಾಜ ಅರಸುರವರು ನಿಜಲಿಂಗಪ್ಪನವರ ಸಂಪುಟದಲ್ಲಿದ್ದಾಗಲೇ ಯೋಚಿಸಿದ್ದ ಹಲವಾರು ವಿಚಾರಗಳನ್ನು ತಮ್ಮ ಆಡಳಿತದ ಅವಧಿಯಲ್ಲಿ ಜಾರಿಗೆ ತಂದರು. ಅದರಲ್ಲಿ ಈ "ಗರೀಬಿ ಹಟಾವೋ" ಆಂದೋಲನವು ಸಹ ಒಂದು. ಅವರಿಗೆ ಯಾವ ಹೆಸರೂ ಬೇಕಿರಲಿಲ್ಲ. ರಾಜ್ಯದ ಮತ್ತು ರಾಷ್ಟ್ರದ ಶೇ. ೪೦ರಷ್ಟು ಬಡತನ ರೇಖೆಗಿಂತ ಕಡಿಮೆ ಇದ್ದವರನ್ನು ಬಡತನದ ರೇಖೆಗಿಂತ ಮೇಲೆತ್ತಲು ಅರಸುರವರು ಕಂಕಣಬದ್ಧರಾಗಿ ದುಡಿದರು. ತಲೆಯ ಮೇಲೊಂದು ಸೂರು, ಉಡಲು ಬಟ್ಟೆ, ಎರಡು ಹೊತ್ತು ಊಟ, ವಿದ್ಯಾಭ್ಯಾಸ, ಮಹಿಳೆಯರ ಉನ್ನತಿ, ಗೃಹನಿರ್ಮಾಣ ಯೋಜನೆ, ಸಾಲಪರಿಹಾರ ಶಾಸನ, ವೃದ್ಧಾಪ್ಯ ವೇತನ ಹಾಗೂ ಭೂಸುಧಾರಣೆಯಂಥ ಯೋಜನೆಗಳು ಅವರ ಮನದಲ್ಲಿ ಅಡಕವಾಗಿದ್ದವು. ಅವುಗಳ ಸಾಕಾರತೆಗಾಗಿ ಅವಿಶ್ರಾಂತವಾಗಿ ದುಡಿದರು. ಒಟ್ಟಾರೆ "ಕೇಂದ್ರ ಸರ್ಕಾರದ ಈ ಯೋಜನೆಯ ಮೂಲ ಕರ್ನಾಟಕವೆಂದರೆ"[೧೧] ಅತಿಶಯೋಕ್ತಿಯಾಗಲಾರದು. ಅವರ ಆಗಿನ ಅನುಭವ ಈಗ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಪ್ರಕಟವಾಯಿತು.

## ೪.೬. ಮಲಹೊರುವ ಪದ್ಧತಿ ನಿಷೇಧ ಕುರಿತು ಚಿಂತನೆ

೧೯೭೭ರಲ್ಲಿ ಅರಸು ಜಾರಿಗೆ ತಂದ ಒಂದು ಕ್ರಾಂತಿಕಾರಿ ದೂರಗಾಮಿ ಪರಿಣಾಮ ಬೀರಬಲ್ಲ "ಮಲಹೊರುವ ಪದ್ಧತಿ"ಯ ನಿಷೇಧ ಶಾಸನ ಪ್ರಮುಖವಾದದ್ದು. ಕೆಳಜಾತಿಯ ಜನರು ಮೇಲ್ಜಾತಿಯ ಜನರ ಮಲವನ್ನು ತಲೆ ಹೊರೆಯಾಗಿ ಸಾಗಿಸುವ ಪದ್ಧತಿಯಿತ್ತು. ಇದಕ್ಕಾಗಿ ದಲಿತ ವರ್ಗದಲ್ಲಿ ಒಂದು ಜಾತಿಯನ್ನೇ ಸೃಷ್ಟಿ ಮಾಡಲಾಗಿತ್ತು. ಜಗತ್ತಿನ ಯಾವ ನಾಗರಿಕ ಸಮಾಜದಲ್ಲಿಯೂ ಆಚರಣೆ ಯಲ್ಲಿಲ್ಲದ ಮಲಹೊರುವ ಪದ್ಧತಿಗೆ ಧಾರ್ಮಿಕ ಆಚರಣೆಯ ಕವಚವನ್ನು ಹೊದಿಸಲಾಗಿತ್ತು. ಇದು ನಿಷೇಧಿಸಲೇಬೇಕಾದ ಅನಿಷ್ಟ ಪದ್ಧತಿಯೆಂದು ಅಂದು ಯಾವ ಸಮಾಜ ಸುಧಾರಕರೂ, ಈ ಕುರಿತು ಚಿಂತಿಸಿರಲಿಲ್ಲ. ಹೀಗಾಗಿ ಕರ್ನಾಟಕದಲ್ಲಿ ಅರಸು ಆರಂಭಿಸಿದ ಸಾಮಾಜಿಕ ಪರಿವರ್ತನೆಯ ವಾತಾವರಣ ದಲ್ಲಿ ಈ ವಿಚಾರ ಕುರಿತು ಚಿಂತನೆ ಚಿಗುರೊಡೆಯಿತು. ಅರಸು ಸಂಪುಟದಲ್ಲಿ ಪೌರಾಡಳಿತ ಸಚಿವರಾಗಿದ್ದ ಬಿ. ಬಸವಲಿಂಗಪ್ಪನವರು ಈ ಪದ್ಧತಿಯ ಉಚ್ಚಾಟನೆಗೆ ದೃಢಸಂಕಲ್ಪ ಮಾಡಿದರು.

ಪ್ರತಿ ಮನೆಯ ಲ್ಯಾಟ್ರಿನ್‌ಗೆ ಹೊಂದಿಕೊಂಡಂತೆ ವೈಜ್ಞಾನಿಕವಾದ ಸೆಪ್ಟಿಕ್ ಟ್ಯಾಂಕ್‌ಗಳನ್ನು ನಿರ್ಮಿಸಿ ಸ್ವಾಸ್ಥ ರಕ್ಷಣೆ ಸಾಧ್ಯವೆಂಬ ಯೋಜನೆ ಯಾರಿಗೂ ಹೊಳೆಯದಿರಲಿಲ್ಲ. ಸರ್ಕಾರವೇ ಇಂತಹ ಒಂದು ಬದಲಿ ವ್ಯವಸ್ಥೆಯ ಸೂತ್ರಗಳನ್ನು ಮುಂದಿಟ್ಟಿತು. ಇಂಥ ಸೆಪ್ಟಿಕ್ ಟ್ಯಾಂಕ್‌ಗಳನ್ನು ಜೋಡಿಸುವ ಆರ್ಥಿಕ ಶಕ್ತಿ ತಮಗಿಲ್ಲವೆಂದು ಜನ ಗೊಣಗಲಾರಂಭಿಸಿದರು. ಇದಕ್ಕೂ ಸರ್ಕಾರ ಒಂದು ಪರಿಹಾರ ಸೂತ್ರವನ್ನು ಕೊಟ್ಟಿತು. ಇಂಥ ಆರ್ಥಿಕ ಶಕ್ತಿಯಿಲ್ಲದ ಕುಟುಂಬಗಳಿಗೆ ಆರ್ಥಿಕ ನೆರವು ನೀಡಿತು. ಈ ಪದ್ಧತಿಯ ನಿಷೇಧ ಕಾನೂನನ್ನು ಪಾಲಿಸಲು ಆರು ತಿಂಗಳು ಕಾಲಾವಕಾಶಕೊಟ್ಟಿತು. ಯಾವುದೇ ನೆಪವೊಡ್ಡಿ ಈ ಕಾನೂನಿನಿಂದ ತಪ್ಪಿಸಿಕೊಳ್ಳಲಾಗದು ಎಂದು ಸ್ಪಷ್ಟವಾದಾಗ, ಜನರು ತಾವೇ ಲ್ಯಾಟ್ರಿನ್ ರೂಮ್‌ಗಳನ್ನು ಕಟ್ಟಿಸಿಕೊಂಡರು. ಕೇವಲ ಆರು ತಿಂಗಳ ಅವಧಿಯಲ್ಲೇ ಈ ನಿಷೇಧ ಕಾನೂನು ಅರ್ಥವತ್ತಾಗಿ ಜಾರಿಗೆ ಬಂತು. ಹೀಗಾಗಿ ಈ ದೇಶದಲ್ಲಿ ಮೊತ್ತಮೊದಲ ಬಾರಿಗೆ ಕರ್ನಾಟಕವು 'ಮಲಹೊರುವ' ಪದ್ಧತಿಯನ್ನು ನಿಷೇಧಿಸಿ ಆ ಜನರನ್ನು ಪೌರಕಾರ್ಮಿಕರನ್ನಾಗಿ ನೇಮಕ ಮಾಡಿಕೊಂಡು ಅವರ ಬದುಕಿಗೆ ದಾರಿಮಾಡಿಕೊಡಲಾಯಿತು.

ಮಾತು ಮಾತಿಗೆ ಭಾರತೀಯ ಸಂಸ್ಕೃತಿಯ 'ಉಜ್ವಲ ಪರಂಪರೆ'ಯ ಸೊಲ್ಲೆತ್ತುವ ಜನರು ಬಹುತೇಕ ರಾಜ್ಯಗಳಲ್ಲಿ ಇಂದಿಗೂ ಈ ಹೀನಾಯ ಪದ್ಧತಿಯನ್ನು ಉಳಿಸಿಕೊಂಡು ಬಂದಿದ್ದಾರೆ. ಆದರೆ ೧೯೭೭ರಿಂದ ಸದ್ದಿಲ್ಲದೆ ಸಾಮಾಜಿಕ ಕ್ರಾಂತಿಯ ಕಿಡಿ ಹೊತ್ತಿಸಿದ ಕರ್ನಾಟಕ ರಾಜ್ಯ ಈ ಪ್ರಶಂಸೆಗೆ ಪಾತ್ರವಾಗಿದೆ. ಇದು ದೇವರಾಜ ಅರಸುರವರ ದಕ್ಷ ಆಡಳಿತದ ಫಲವೆಂದರೆ ತಪ್ಪಾಗಲಾರದು. ಆದರೆ ಅರಸು ಅವರು ಇಲ್ಲದ ಇಂದಿನ ಕರ್ನಾಟಕದಲ್ಲಿ ಅವರ ಜನಪರ ಯೋಜನೆ ಮತ್ತು ಕೆಲಸ ಕಾರ್ಯಗಳಿಗೆ ಹಿನ್ನೆಡೆ ಉಂಟಾಗಿರುವುದು. ಅಸ್ಪೃಶ್ಯರ ಪುನಶ್ಚೇತನಕ್ಕೆ ಅವಕಾಶವಿಲ್ಲದಾಗಿ ಅವರು ಎಲ್ಲಾ ಕ್ಷೇತ್ರಗಳಲ್ಲಿ ಹಿಂದಕ್ಕೆ ತಳ್ಳಲ್ಪಟ್ಟಿರುವುದು ಅತ್ಯಂತ ದುರಾದೃಷ್ಟಕರ ಸಂಗತಿಯಾಗಿದೆ.

## ೪.೭. ಹಿಂದುಳಿದ ವರ್ಗಗಳ ಸಂಘಟನೆ ಕುರಿತು ಚಿಂತನೆ

೧೯೭೭ರಲ್ಲಿ ಸಾರ್ವತ್ರಿಕ ಚುನಾವಣೆಯಲ್ಲಿ ಇಂದಿರಾಗಾಂಧಿಯವರ ಭವಿಷ್ಯವೆ ಅನಿಶ್ಚಿತವಾಗಿತ್ತು. ಕಾಂಗ್ರೆಸ್ ಒಡಕಿನ ನಂತರ ಕರ್ನಾಟಕದ ಕಾಂಗ್ರೆಸ್ ಪಕ್ಷದ ಹಲವು ಮುಖಂಡರು 'ಸಂಸ್ಥಾ ಕಾಂಗ್ರೆಸ್'ನಲ್ಲಿಯೇ ಉಳಿದರು. ಈ ಸಂದರ್ಭದಲ್ಲಿ ಅರಸು ಅವರಿಗಿಂತಲೂ ಪ್ರಮುಖರಾಗಿದ್ದ ಕೆಂಗಲ್ ಹನುಮಂತಯ್ಯನವರು ಇಂದಿರಾಗಾಂಧಿಯವರನ್ನು ಬೆಂಬಲಿಸಿದರು. ಈ ಸಮಯದಲ್ಲಿ ಅರಸು ಜನರೊಡನೆ ನೇರ ಸಂಪರ್ಕ ಬೆಳೆಸಿಕೊಂಡು ಅವರ ಬೆಂಬಲ ಪಡೆಯುವುದೇ ಮಾರ್ಗವಾಗಿತ್ತು. ಹೀಗಾಗಿ ಪ್ರಬಲರ ಜಾತಿ ರಾಜಕಾರಣದಲ್ಲಿ ಸವಲತ್ತುಗಳಿಂದ ವಂಚಿತರಾದ ಮತ್ತು ರಾಜಕೀಯ ಅಧಿಕಾರವನ್ನು ತಮಗೂ ಲಭ್ಯವಾಗಿಸಿಕೊಳ್ಳಬೇಕೆಂಬ ಹಂಬಲ ಆಗತಾನೆ ಬೆಳೆಸಿಕೊಳ್ಳುತ್ತಿದ್ದ ಇತರ ಹಿಂದುಳಿದ ಜಾತಿಗಳು ಜಿಲ್ಲಾ ಹಾಗೂ ತಾಲೂಕ ಪ್ರಾಂತಗಳಲ್ಲಿದ್ದ ಈ ಜನರು ರಾಜಕೀಯವಾಗಿ ಸಂಘಟಿತರಾಗಿರಲಿಲ್ಲ. ಆ ನಿಟ್ಟಿನಲ್ಲಿ ಯಾವ ತರಹದ ರಾಜಕೀಯ ಅನುಭವ ಪಡೆದವರಾಗಿರಲಿಲ್ಲ. ಸರ್ಕಾರಿ ಸೇವೆ ಮತ್ತು ಶಿಕ್ಷಣದಿಂದ ವಂಚಿತರಾದ, ಪುಡಿ ವ್ಯಾಪಾರದಲ್ಲಿ ತೊಡಗಿದ, ಸರ್ಕಾರದ ನಗಣ್ಯ ಹುದ್ದೆಗಳಲ್ಲಿದ್ದ ಜನರ ಬೆಂಬಲ ಗಳಿಸಲು ಅರಸರವರು ಪ್ರಯತ್ನಿಸಿದರು. ಕಾರಣ ಈ ಜನರಲ್ಲಿದ್ದ ಅಭದ್ರತೆ, ರಾಜಕೀಯ ಅಸಂಘಟನೆ ಒಂದು ರೀತಿಯಲ್ಲಿ ವರದಾನವೇ ಆಯಿತು. ಮುಖ್ಯವಾಗಿ ಈ ವರ್ಗದ ಜನರಲ್ಲಿ ನಾಯಕತ್ವ ಇಲ್ಲದೇ ಇರುವುದರಿಂದ ಅರಸರನ್ನೇ ಸಂಪೂರ್ಣವಾಗಿ ನಂಬಬೇಕಾಯಿತು. ಇದು ಅರಸು ಅವರ ರಾಜಕೀಯ ದೂರದೃಷ್ಟಿಯ ಬೆಳವಣಿಗೆಗೆ ಮತ್ತಷ್ಟು ಇಂಬು ನೀಡಿತು. ಪ್ರಬಲ ರಾಜಕಾರಣದ ಪರ್ಯಾಯವನ್ನು ಅರಸಿ ಹೊರಟಿದ್ದ ಜನರಿಗೆ ರಾಜಕೀಯ ಪ್ರಜ್ಞೆ ಮೂಡಿ ಬಂದದ್ದು ಆರ್ಥಿಕ ಬದಲಾವಣೆಯೆಂದೇನೂ ಅಲ್ಲ, ಪ್ರಜಾಪ್ರಭುತ್ವದ ರಾಜಕೀಯ ಪ್ರಕ್ರಿಯೆಯಲ್ಲಿ ಸಂಘಟಿತರಾಗಿರುವುದರಿಂದ ಲಾಭದ ಪ್ರಯೋಗಕ್ಕೆ ತಮ್ಮನ್ನು ತೆರೆದುಕೊಂಡುದರ ಪರಿಣಾಮ ಇದು. ರಾಜಕೀಯವಾಗಿ ಇದುವರೆಗೂ ಕಡೆಗಣಿಸಲ್ಪಟ್ಟಿದ್ದ ಜಾತಿಗಳಲ್ಲಿ ಹೊಸ ರಾಜಕೀಯ ಪ್ರಜ್ಞೆ ಮೂಡಿದ್ದು ಅರಸು ಅವರ ವಿಜಯಕ್ಕೆ ಕಾರಣವಾಯಿತು. ಮೊತ್ತಮೊದಲ ಬಾರಿಗೆ ಪ್ರಬಲೇತರರ ಜಾತಿಗೆ ಸೇರಿದ ಬಹಳಷ್ಟು ಮಂದಿ ಶಾಸಕರಾಗಿ ಚುನಾಯಿತರಾಗಿ ಆಯ್ಕೆಯಾದದ್ದು ಅರಸರಿಗೆ ಮುಖ್ಯಮಂತ್ರಿಯಾಗಲು ಅವಕಾಶ ಮಾಡಿಕೊಟ್ಟಿತು. ಆದರೂ ಪ್ರಬಲೇತರರ ಜಾತಿಗಳ ಸಂಘಟನೆ ಅವರ ರಾಜಕೀಯದ ಉಳಿವಿಗೆ ಅಗತ್ಯವಾದುದರಿಂದ ಅದನ್ನು ಸಾಧಿಸಲು ಯಾವ ಮಾರ್ಗವನ್ನೂ ಬಳಸಲು ತಯಾರಿದ್ದರು. ಹಿಂದುಳಿದ ವರ್ಗಗಳ (ಜಾತಿ) ಸಂಘಗಳಿಗೆ ಬೇಕಾದ ಹಣ, ಸಾರ್ವಜನಿಕ ಸಭೆಗೆ ಜನರನ್ನು ಕರೆತರಲು ವಾಹನ ಸೌಲಭ್ಯ, ಬಡವರ ಮಕ್ಕಳಿಗೆ ಶಿಕ್ಷಣ ಸೌಲಭ್ಯ, ಶೋಷಣೆಗೊಳಗಾದವರ ಜಾತಿಯವರಿಗೆ ಸಂಬಂಧಪಟ್ಟ ಕೆಲಸಗಳಲ್ಲಿ ಅವರಿಗೆ ಅನ್ಯಾಯವಾಗದ ರೀತಿಯಲ್ಲಿ ಪೋಲಿಸರಿಗೆ ಒತ್ತಡ ಮತ್ತು ಮಲಹೊರುವಂಥ ಅವಹೇಳನಕಾರಿ ಕೆಲಸಗಳ ನಿಷೇಧ ಇತ್ಯಾದಿ ಸೌಲಭ್ಯಗಳನ್ನು ಒದಗಿಸಿದರು. ಈ ರೀತಿ ಹಿಂದುಳಿದ ವರ್ಗಗಳನ್ನು ಸಂಘಟಿಸುವುದರೊಂದಿಗೆ ತಮ್ಮ ರಾಜಕೀಯ ಸ್ಥಾನವನ್ನು ಭದ್ರಪಡಿಸಿಕೊಂಡರು. ಈ ಕಾರ್ಯಕ್ರಮಗಳಿಗೆ ಪ್ರಬಲ ಜಾತಿಯವರಿಂದ ಪ್ರತಿರೋಧ ಬರದಂತೆ ಮಾಡಲು ಮೇಲ್ವರ್ಗಗಳಲ್ಲಿ ಆರ್ಥಿಕವಾಗಿ ಹಿಂದುಳಿದವರಿಗೆ ಸರ್ಕಾರದ ವತಿಯಿಂದ ಸೌಲಭ್ಯಗಳಿಂದ ವಂಚಿತರಾಗದಂತೆ ನೋಡಿಕೊಳ್ಳಲಾಯಿತು.

## ೪.೮. ಅಸ್ಪೃಶ್ಯತೆ ನಿವಾರಣೆ ಕುರಿತು ಚಿಂತನೆ

ಅಸ್ಪೃಶ್ಯತೆಯು ಹಿಂದು ಸಮಾಜದ ವರ್ಣವ್ಯವಸ್ಥೆಯಲ್ಲಿನ ಒಂದು 'ಅನಿಷ್ಠ ಕೂಸು'. ಒಂದೇ ಸಮಾಜದ ಒಂದು ಜಾತಿಯು ಇನ್ನೊಂದು ಜಾತಿಯ ಮೇಲೆ ನಡೆಸಿಕೊಂಡು ಬಂದ ಸಾಮಾಜಿಕ ಅಸಹನೆ. ಅಸ್ಪೃಶ್ಯತೆ ಎಂದರೆ 'ಹೊಲೆ' ಮೈಲಿಗೆ, 'ಕಳಂಕ' ಎಂದರ್ಥ. ಹಿಂದು ಸಮಾಜದ ಅತ್ಯಂತ ಕೆಳಸ್ತರದವರು ಜೀವನವಿಡಿ ಅನುಭವಿಸಬೇಕಾದ ಶಿಕ್ಷೆ. ಒಂದು ಕಾಲಕ್ಕೆ ಸಾಮಾಜಿಕ ವ್ಯವಸ್ಥೆ ಎನಿಸಿಕೊಂಡಿದ್ದ ವರ್ಣವ್ಯವಸ್ಥೆ, ಇಂದು ಕೊಳೆತು ನಾರುತ್ತಿರುವ ದುರ್ಗಂಧ, ನಿಂತ ನೀರು. ಇಂದು ವರ್ಣವ್ಯವಸ್ಥೆಯಲ್ಲಿನ ಉಚ್ಛ-ನೀಚ ಜಾತಿಗೆ ಗುಣ-ಕರ್ಮಾನುಸಾರ ವಿಭಜನೆ ಅಸಾಧ್ಯ. ಏಕೆಂದರೆ ಎಲ್ಲರೂ ನೀಚರೇ, ಆದರೆ ಹುಟ್ಟನಿಂದಲೇ ಅಂಟಿಕೊಂಡು ಬಂದ ಈ ಜಾತಿ ಬ್ರಾಹ್ಮಣರನ್ನು ಹುಟ್ಟಿನಿಂದ ಬ್ರಾಹ್ಮಣರನ್ನಾಗಿಸಿದರೆ, ಹರಿಜನರನ್ನು ಹುಟ್ಟಿನಿಂದಲೇ ಹರಿಜನವೆಂದು ದೂರವಿಡುತ್ತದೆ. ವಿಶ್ವ ಇತಿಹಾಸದಲ್ಲಿ ಈ ಕ್ರೌರ್ಯಕ್ಕೆ, ಅಸಹನೆಗೆ, ಅಸಹ್ಯ ಪದ್ಧತಿಗೆ ಸಮಾನವಾದದ್ದು ಯಾವುದೂ ಇಲ್ಲ. ಹಿಂದುಗಳಲ್ಲದವರು ಶುಚಿ-ಅಶುಚಿಯನ್ನು ಮೈಲಿಗೆಯಾದರೆ ಅಂತಹವರನ್ನು ಶುದ್ಧೀಕರಣಗೊಳಿಸಲು ಸಾಧ್ಯ ಎಂಬುದು ಆ ಸಮಾಜಗಳ ನಿಲುವು. ಅಲ್ಲದೇ ಈ ಮೈಲಿಗೆ ತಾತ್ಕಾಲಿಕ ಆದರೆ ಹಿಂದುಗಳಲ್ಲಿ ಒಮ್ಮೆ ಅಶುದ್ಧನಾದವನು ಎಂದಿಗೂ ಶುದ್ಧಿಗೊಳ್ಳಲಾರ. ಅದಕ್ಕಾಗಿ "ಊರಿಗೊಂದು ಹೊಲಗೇರಿ" ಎಂಬ ಮಾತನ್ನು ಆಡಿ, ಅಸ್ಪೃಶ್ಯರನ್ನು ಇತರ ಜನರು ವಾಸಿಸುವ ಜನಗಳಿಂದ ದೂರ ಇಟ್ಟರು.

ದೇಶದಲ್ಲಿ ಹರಿಜನರಿಗೆ ಶೇ. ೧೮ರಷ್ಟು ಸರ್ಕಾರಿ ಹುದ್ದೆಗಳನ್ನು ಮೀಸಲಿಟ್ಟರು. ಪರಂಪರಾನುಗತವಾಗಿ ತಮ್ಮದೇ ಆಗಿದ್ದ ಸ್ಥಾನಮಾನಗಳೆಲ್ಲ ಹಂಚಿ ಹೋಗುವ ಭೀತಿ ಮೇಲ್ವರ್ಗಕ್ಕೆ. ಸರ್ಕಾರಿ ಸವಲತ್ತುಗಳಲ್ಲಿಯೂ ಸಿಂಹಪಾಲು. ಪಟ್ಟಭದ್ರ ವಿದ್ಯಾವಂತ ಪ್ರಬಲ ಕೋಮುಗಳ ಹಲವರಿಗೆ ಮೀಸಲು. ಸುಲಿಗೆ, ಶೋಷಣೆಯ ಕಾಲಚಕ್ರಕ್ಕೆ ಸಿಕ್ಕಿ ನುಚ್ಚುನೂರಾದವರು ಎಲ್ಲಾ ಕೋಮಿನ ಬಡವರು, ದಲಿತರು. ಈ ವಂಚಿತರ ಬಾಳು ಅಂಬಿಗನಿಲ್ಲದ ದೋಣಿ. ಈ ದೋಣಿಗೆ ಚಾಲನೆ ದೊರಕಿಸಿಕೊಟ್ಟವರು ದೇವರಾಜ ಅರಸು. ಅವರ ಆಡಳಿತಕ್ಕೆ ಮುಂಚೆ ಸರ್ಕಾರಿ ಸ್ಥಾನಮಾನಗಳೆಲ್ಲ ಕಬಳಿಸಿದ್ದ ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗ ಜಾತಿಯನ್ನು ಬಿಟ್ಟು ಸಮಾಜದಲ್ಲಿ ಉಳಿದ ಜಾತಿಯವರೂ ಇರುವರೆಂಬುದು ಬೆಳಕಿಗೆ ಬಂದಿರಲಿಲ್ಲ. ಅರಸು ಅವರ ಕಾಲದಲ್ಲಿ ಈ ಮುಂದುವರಿದ ಮೇಲ್ಜಾತಿಗಳನ್ನು ಬಿಟ್ಟು ಉಳಿದ ಅಲ್ಪಸಂಖ್ಯಾತ ಹಿಂದುಳಿದ ವರ್ಗದ ಜಾತಿಯ ಜನರಿಗೆ ಶೇ. ೫೫ರಷ್ಟು ಮೀಸಲು ವ್ಯವಸ್ಥೆಯನ್ನು ಜಾರಿಗೆ ತಂದರು. ಇದು ಹಿಂದುಳಿದವರ್ಗ ಮತ್ತು ಅಲ್ಪಸಂಖ್ಯಾತರಿಗೆ ಆರ್ಥಿಕ, ಸಾಮಾಜಿಕ ಸ್ಥಿತಿಗತಿಯ ಸುಧಾರಣೆಗೆ ಅರಸು ತೋರಿದ ದಾರಿದೀಪವಾಗಿತ್ತು. ಹಾವನೂರು ಆಯೋಗ ನೀಡಿದ ವರದಿಯನ್ನು ಯಥಾವತ್ತಾಗಿ ಜಾರಿಗೆ ತಂದು ಹಿಂದುಳಿದ ವರ್ಗಗಳಿಗೆ ರಾಜ್ಯದಲ್ಲಿ ಸೂಕ್ತ ಸ್ಥಾನಮಾನವನ್ನು ಒದಗಿಸಿಕೊಟ್ಟರು. ಮುಂದೆ ಬಂದ 'ಮಂಡಲ್' ವರದಿಗೆ ಇದು ಸ್ಫೂರ್ತಿ ನೀಡಿದ್ದನ್ನು ನೆನಪಿಸಿಕೊಳ್ಳಬಹುದು.

## ೪.೯. ಶಿಕ್ಷಣ ವ್ಯವಸ್ಥೆಯಲ್ಲಾದ ಬದಲಾವಣೆ

ಬದುಕನ್ನು ಪರಿವರ್ತಿಸುವ ಸಾಧನ ಶಿಕ್ಷಣ. ಓದಿನ ಮನೆಯ ಬಾಗಿಲು ಯಾರಿಗೂ ಮುಚ್ಚಿರಬಾರದು. ಒಂದು ಕಾಲಕ್ಕೆ ಭಾರತೀಯ ಸಮಾಜ ಶಿಕ್ಷಿತರು ಹಾಗೂ ಅಶಿಕ್ಷಿತರ ನಡುವೆ ದೊಡ್ಡ ಕಂದಕವನ್ನು ನಿರ್ಮಿಸಿತ್ತು. ಕೆಲವು ಮೇಲ್ಜಾತಿಯವರನ್ನು ಬಿಟ್ಟು, ಎಲ್ಲರಿಗೂ ವಿದ್ಯೆ ನಿಷಿದ್ಧ. ಮಹಿಳೆಯರೂ ಎರಡನೆಯ ಗುಂಪಿಗೆ ಸೇರಿದವರಾಗಿದ್ದರು. ವ್ಯಕ್ತಿಯ ವಿಚಾರ ಸಾಮರ್ಥ್ಯವನ್ನು ಹೆಚ್ಚಿಸುವ, ಸಂಸ್ಕಾರವಂತರನ್ನಾಗಿ ಮಾಡುವ ಜೀವನದ ದಾರಿ-ಗುರಿಯನ್ನು ತೋರಿಸಿ ಕೊಡುವ ವಿದ್ಯೆಗೆ ಬೇಲಿ ಬಿದ್ದಿತು. ಜನಸಂಖ್ಯೆಯ ಬಹುಪಾಲು ಅತ್ಯಂತ ದಾರುಣ ವಿಷಮತೆಗೆ ಅಪಾರ ಅಸಮಾನತೆ ಹಾಗೂ ತಿಳುವಳಿಕೆ ಇಲ್ಲದ ಮೌಢ್ಯದಲ್ಲಿ ಮುಳುಗಿದ್ದರಿಂದಲೇ ಅನ್ಯಾಕ್ರಮಣಕ್ಕೆ ದೇಶ ಪಕ್ಕಾಯಿತು. ಬ್ರಿಟಿಷರ ಆಳ್ವಿಕೆಯ ಪೂರ್ವದ ಭಾರತದ ಸಮಾಜದ ವ್ಯವಸ್ಥೆಯನ್ನು ಪಕ್ಷಪಾತ ಪೂರ್ಣವಾಗಿ ಮುಂದುವರಿಸಿದ ಇಂಗ್ಲೀಷರು ವಿದ್ಯೆ ನೀಡಿಕೆಯಲ್ಲಿ ಜನಾಂಗ ಹಾಗೂ ಲಿಂಗಬೇಧವನ್ನು ಮಾಡಲಿಲ್ಲ. ಸ್ವಾತಂತ್ರ್ಯದ ಬಳಿಕ ಶಿಕ್ಷಣ ಎಲ್ಲರ ಸ್ವತ್ತಾಗುವುದಕ್ಕೆ ಈ ಅಂಶವು ಕಾರಣ. ಸ್ವಾತಂತ್ರ್ಯದ ಬಳಿಕವೂ ರಾಜ್ಯಾಂಗದ ಪ್ರಕಾರ ಭಾರತ 'ಜಾತ್ಯಾತೀತ ರಾಷ್ಟ್ರ' ಎಂದು ಮಾಡಿಕೊಂಡಿದ್ದರೂ ಆದದ್ದು ಬೇರೆಯೇ. ಅಸಮಾನತೆ ತೊಲಗಲಿಲ್ಲ, ಅಸ್ಪೃಶ್ಯತೆ ಅಳಿಯಲಿಲ್ಲ, ಜಾತಿ ಪದ್ಧತಿ ಹೋಗಲಿಲ್ಲ. ಪ್ರತಿಯಾಗಿ ಒಂದೊಂದು ಸಾರ್ವತ್ರಿಕ ಮಹಾಚುನಾವಣೆಯೂ ಜಾತಿ ವಿಷವೃಕ್ಷಕ್ಕೆ ನೀರೆರೆದು ಪೋಷಿಸಿದವು. ಅಂತೆಯೇ ಇಡೀ ಸಮಾಜದ ಸ್ವತ್ತಾಗಬೇಕಾಗಿದ್ದ ಶಿಕ್ಷಣ, ಜಾತಿಕೋಮುಗಳ ಕೈಗೆ ಸಿಕ್ಕಿ-ಸಿಕ್ಕಾಯಿತು. ಜಾತ್ಯಾತೀತರನ್ನಾಗಿ ಪ್ರಜೆಗಳನ್ನು ರೂಪಿಸುವ ಶಿಕ್ಷಣಕ್ಷೇತ್ರವನ್ನು ಜಾತಿ ಶಕ್ತಿಗಳಿಗೆ ದತ್ತು ಬಿಟ್ಟುಕೊಟ್ಟಿದ್ದು ವಿಪರ್ಯಾಸದ ಸಂಗತಿ.

ಸ್ವಾತಂತ್ರ್ಯನಂತರ ರಾಷ್ಟ್ರೀಯ ದೃಷ್ಟಿಯಿಂದ ಶಿಕ್ಷಣವನ್ನು ಕೇಂದ್ರ ಸರ್ಕಾರ ತನ್ನ ಕೈಯಲ್ಲಿ ಇಟ್ಟುಕೊಳ್ಳಬೇಕಿತ್ತು. ಕನಿಷ್ಠ ಶಿಕ್ಷಣವನ್ನಾದರೂ ಕಡ್ಡಾಯವಾಗಿಯಾದರೂ ಯೋಗ್ಯರೀತಿಯಲ್ಲಿ ಜಾರಿಗೆ ತರಬೇಕಿತ್ತು. ಅದಕ್ಕೆ ಬದಲಾಗಿ ಶಿಕ್ಷಣ ನೀಡುವಿಕೆ ರಾಜ್ಯಗಳ ಹೊಣೆಯಾಯಿತು. ವಿವಿಧ ಜಾತಿ ಮತಗಳ ರಾಜಕಾರಣ ಮೇಲುಗೈ ಪಡೆದಿದ್ದ ರಾಜ್ಯಗಳಲ್ಲಿ ಜಾತಿ-ಜಾತಿಗೂ ಒಂದು ಶಿಕ್ಷಣ ಸಂಸ್ಥೆ ಮೇಲೆದ್ದವು. ರಾಷ್ಟ್ರೀಯ ಪ್ರಜ್ಞೆ ಬೆಳೆಸಬೇಕಾಗಿದ್ದ ಶಿಕ್ಷಣ ಜಾತಿ ಭೂತಗಳ ಕೈಗೆ ಸಿಕ್ಕು ನಲುಗಿತು. ರಾಷ್ಟ್ರೀಯ ಏಕತೆಯ ಭಾವನೆಯಿಂದ ದೂರ ಸರಿಯಿತು. ಇಂದು ಶೈಕ್ಷಣಿಕ ಪದವಿ ಪ್ರಮಾಣಪತ್ರಗಳನ್ನು ಹಂಚುವ ವಾಣಿಜ್ಯ ಕೇಂದ್ರಗಳಾಗಿದ್ದರೆ, ಅದಕ್ಕೆ ನಾವು ಆರಂಭದಲ್ಲಿ ಎಡವಿದ್ದೇ ಕಾರಣ. ಎಲ್ಲಾ ಸ್ಥಿತಿಗಳನ್ನು ಅರಸು ಚೆನ್ನಾಗಿ ಅರಿತಂತಿದ್ದರು. ವಿಚಾರವಂತರ, ರಾಷ್ಟ್ರೀಯ ಮನೋಭಾವದ ಜನರ ಕೂಗು ಅವರ ಕಿವಿಯನ್ನು ಮುಟ್ಟಿತ್ತು. ಶಿಕ್ಷಣಕ್ಷೇತ್ರಕ್ಕೆ ಓಡಿದ ಗೆದ್ದಲು, ಬಿದ್ದಿರುವ ಜಾತಿಯ ಶೃಂಖಲೆ ಅರಸರ ಕಣ್ಣಿಗೆ ಕಟ್ಟಿತ್ತು. ರಾಜ್ಯದಲ್ಲಿ ಶಿಕ್ಷಣವನ್ನು ರಾಷ್ಟ್ರೀಕರಿಸಲು ಅರಸು ನಡೆಸಿದ ಹವಣಿಕೆಗೆ ಇದೇ ಮೂಲ ಪ್ರೇರಣೆ.

ಶಿಕ್ಷಣ ಕ್ಷೇತ್ರದ ಅಸ್ತವ್ಯಸ್ತ ಪರಿಸ್ಥಿತಿ ಅರಸರಿಗೆ ಕಂಡಿತು. ಇದರಿಂದಾಗಿ ಸಂವಿಧಾನದನ್ವಯ ಶೈಕ್ಷಣಿಕ ಹಾಗೂ ಔದ್ಯೋಗಿಕ ಮೀಸಲಾತಿ ಸೌಲಭ್ಯವನ್ನು ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರಿಗೆ ಕಲ್ಪಿಸಲಾಯಿತು.

ನಮ್ಮ ದೇಶದ ಜನರು ಹಿಂದುಳಿಯುವುದಕ್ಕೆ ಮುಖ್ಯ ಕಾರಣ ಅನಕ್ಷರತೆ ಮತ್ತು ಶಿಕ್ಷಣದ ಕೊರತೆ. ಇದನ್ನು ನಿರ್ಮೂಲನೆಗೊಳಿಸಲು ಹಿಂದುಳಿದ ವರ್ಗದ ವಿದ್ಯಾರ್ಥಿಗಳು ಶಿಕ್ಷಣವನ್ನು ಪಡೆಯುವಂತೆ ಮಾಡಲು ಅವರಿಗಾಗಿ ಪ್ರಾಥಮಿಕ ಹಂತದಿಂದಲೇ ವಿದ್ಯಾರ್ಥಿನಿಲಯಗಳನ್ನು ಕರ್ನಾಟಕದಲ್ಲಿ ಅರಸರವರ ಆಡಳಿತದ ಅವಧಿಯಲ್ಲಿ ಸ್ಥಾಪಿಸಲಾಯಿತು. ಪರಿಣಾಮವಾಗಿ ಎಷ್ಟೋ ಜನ ಹಿಂದುಳಿದ ದುರ್ಬಲವರ್ಗದ ವಿದ್ಯಾರ್ಥಿಗಳು ಶಿಕ್ಷಣ ಪಡೆಯಲು ಸಾಧ್ಯವಾಯಿತು.

ದೇವರಾಜ ಅರಸು ಅವರು ಸ್ತ್ರೀಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟವರಲ್ಲಿ ಪ್ರಮುಖರು. ಇವರ ಆಡಳಿತದ ಅವಧಿಯಲ್ಲಿ ದುರ್ಬಲವರ್ಗದ ಮತ್ತು ಹಿಂದುಳಿದವರ್ಗದ ಮಹಿಳಾ ಶಿಕ್ಷಣವು ಹೆಚ್ಚಿನ ಮಹತ್ವ ಪಡೆಯಿತು. ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳಿಗೆ ಶಿಕ್ಷಣವನ್ನು ಪಡೆಯುವುದರಲ್ಲಿರುವ ತೊಂದರೆಯನ್ನು ನಿವಾರಿಸುವುದಕ್ಕಾಗಿ ಪ್ರಾಥಮಿಕ ಹಂತದಿಂದಲೇ ಹಿಂದುಳಿದ ವರ್ಗದ ವಿದ್ಯಾರ್ಥಿನಿಯರಿಗಾಗಿ ವಸತಿಗೃಹಗಳನ್ನು ಸ್ಥಾಪಿಸಿ, ಬಡಹುಡುಗಿಯರು ಶಿಕ್ಷಣ ಪಡೆಯಲು ಬೇಕಾದ ಪ್ರೋತ್ಸಾಹವನ್ನು ಕೊಟ್ಟವರು ದೇವರಾಜ ಅರಸುರವರು. ೧೯೭೦ರ ದಶಕದಲ್ಲಿ ದೇವರಾಜ ಅರಸುರವರ ದೂರದೃಷ್ಟಿ ಫಲವಾಗಿ ಪದವಿಪೂರ್ವ ಮತ್ತು ಪದವಿ ಶಿಕ್ಷಣ ವ್ಯವಸ್ಥೆಯ ವಿಸ್ತರಣೆ ಕಾರ್ಯಕ್ಕೆ ಚಾಲನೆ ದೊರಕಿತು. ಪರಿಣಾಮವಾಗಿ ಇಂದು ನಾವು ಕರ್ನಾಟಕದಲ್ಲಿ ತಾಲೂಕು ಮತ್ತು ಹೋಬಳಿ ಕೇಂದ್ರಗಳಲ್ಲಿ ಉನ್ನತ ಶಿಕ್ಷಣದ ಕಾಲೇಜುಗಳನ್ನು ಹೊಂದಿದ್ದೇವೆ. ಇದರಿಂದ ಎಲ್ಲರಿಗೂ ಮುಖ್ಯವಾಗಿ ಸ್ತ್ರೀಯರಿಗೆ ಉನ್ನತ ಶಿಕ್ಷಣವು ಅವರ ಮನೆಗಳ ಸನಿಹದಲ್ಲೇ ದೊರಕುವಂತಾಗಿದೆ. ಇದು ಅರಸುರವರು ತಂದ ಕ್ರಾಂತಿಕಾರಕ ಬದಲಾವಣೆಗಳಲ್ಲಿ ಪ್ರಮುಖವಾದದ್ದಾಗಿದೆ.

ಕರ್ನಾಟಕದಲ್ಲಿ ಪ್ರತಿಯೊಂದು ಜಿಲ್ಲಾ ಕೇಂದ್ರಗಳಲ್ಲಿಯೂ ವಿದ್ಯಾರ್ಥಿನಿಲಯಗಳಿವೆ. ಆದರೆ ಈ ಎಲ್ಲವುಗಳು ಉಳ್ಳವರ ಸ್ವತ್ತುಗಳಾಗಿವೆ. ಅದೇ ಜಾತಿಯ ಅರ್ಹ ಹಾಗೂ ಬಡ ವಿದ್ಯಾರ್ಥಿಗಳಿಗೆ ಅಲ್ಲಿ ಸುಳಿಯಲು ಬಿಡುವುದಿಲ್ಲ. ಹಣದಿಂದಲೇ ಎಲ್ಲವು ತೀರ್ಮಾನವಾಗುವ ಈ ಖಾಸಗಿ ವಿದ್ಯಾರ್ಥಿ ನಿಲಯಗಳು ಜಾತಿ ವ್ಯವಸ್ಥೆಯನ್ನು ಪರೋಕ್ಷವಾಗಿ ಪೋಷಿಸುವ ಕೇಂದ್ರಗಳಾಗಿವೆ. ಈ ತರಹದ ಎಲ್ಲಾ ನ್ಯೂನತೆಯಿಂದ ಬಳಸುತ್ತಿದ್ದ ಗ್ರಾಮೀಣ ಪರಿಸರದ ಲಕ್ಷ-ಲಕ್ಷ ವಿದ್ಯಾರ್ಥಿಗಳಿಗೆ ಆಶಾಕಿರಣವಾಗಿ ಹಿಂದುಳಿದ ವರ್ಗದವರ ವಿದ್ಯಾರ್ಥಿನಿಲಯಗಳು ಪ್ರಾರಂಭವಾದದ್ದು ಕರ್ನಾಟಕದ ಮೈಲಿಗಲ್ಲು. ಹರಿಜನ, ಗಿರಿಜನರೂ ಸೇರಿದಂತೆ ಎಲ್ಲಾ ವರ್ಗದ ವಿದ್ಯಾರ್ಥಿಗಳು ಒಟ್ಟಿಗೆ ಕಲಿಯಲು, ವಾಸಿಸಲು ಈ ಮೂಲಕ ಸಮಾನತೆಯ ಅವಕಾಶವನ್ನು ಮೊದಲಿಗರಾಗಿ ಕಲ್ಪಿಸಿಕೊಟ್ಟವರು ದೇವರಾಜ ಅರಸು. ಈ ಯೋಜನೆಯಿಂದ ಅಸಂಘಟಿತ ವರ್ಗಗಳಾದ ಬೆಸ್ತ, ಬೇಡ, ಕುರುಬ, ಕುಂಬಾರ, ತಿಗಳ, ಅಗಸ, ಉಪ್ಪಾರ, ಜಂಗಮ, ಲಿಂಗಾಯತ ಎಲ್ಲಾ ವರ್ಗದ ವಿದ್ಯಾರ್ಥಿಗಳು ಒಟ್ಟಿಗೆ ಕಲಿಯಲು ಸುವರ್ಣಾವಕಾಶ ಕಲ್ಪಿತವಾಯಿತು. ಈ ರೀತಿ ಶಿಕ್ಷಣ ವ್ಯವಸ್ಥೆಯಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನೆಲ್ಲ ಜಾರಿಗೆ ತಂದು 'ಸರ್ವರಿಗೂ ಶಿಕ್ಷಣ' ಎನ್ನುವಂತೆ ಶೈಕ್ಷಣಿಕ ಮಟ್ಟವನ್ನು ಹೆಚ್ಚಿಸಿದರು.

ಟಿಪ್ಪಣಿಗಳು

೧. ವೆಂಕಪ್ಪಗೌಡ ಕೋಣಂದೂರು., (ಸಂ.), (೧೯೮೪), **ಪರಿವರ್ತನೆಯ ಹರಿಕಾರ,** ದೇವರಾಜ ಅರಸು, ಪು.೨೭೬

೨. ವೆಂಕಟೇಶ ಎಚ್.ಎ., (ಸಂ.), (೨೦೦೦), **ಕರ್ನಾಟಕದ ಅರಸು,** ಪು.೩೩

೩. ಮಧುಕೇಶ., (೨೦೦೨), **ಅರಸು ಜೀವನ ಚರಿತ್ರೆ,** ಪು.೪೩

೪. ರಾಮಚಂದ್ರನ್ ಸಿ.ಎನ್., (೨೦೦೩), **ಸುಧಾ ವಾರಪತ್ರಿಕೆ,** ಪು.೧೭,೧೮

೫. ದೇವರಾಜ ಅರಸು ಸಂಶೋಧನಾ ಸಂಸ್ಥೆ., (೧೯೯೭), **ಸಾಧನೆಗಳ ಸರದಾರ ದೇವರಾಜ ಅರಸು,** ಪು.೮೧

೬. ಅದೇ, ಪು.೮೨

೭. ಸದಾನಂದ ಜೆ.ಎಸ್., (೧೯೮೭), **ಹಿಂದುಳಿದ ವರ್ಗಗಳ ಸಂಘಟನೆ ಮತ್ತು ಹಾವನೂರು ವರದಿ,** ಪು.೪೩

೮. ದೇವರಾಜ ಅರಸು ಸಂಶೋಧನಾ ಸಂಸ್ಥೆ., (೧೯೯೭), ಮೇಲಿನದೆ, ಪು.೮೦

೯. ನಾಯಕ ಹಾ.ಮಾ., (ಸಂ.), (೧೯೭೬), **ಪ್ರಗತಿಪಥ,** ಪು.೪೪

೧೦. ಮಧುಕೇಶ., (೨೦೦೨), ಮೇಲಿನದೆ, ಪು.೮೪

೧೧. ದೇವರಾಜ ಅರಸು ಸಂಶೋಧನಾ ಸಂಸ್ಥೆ., (೧೯೯೩), ಮೇಲಿನದೆ, ಪು.೮೪

ಅಧ್ಯಾಯ ೫

# ಅರಸು: ನವ ಆರ್ಥಿಕತೆಯ ಚಿಂತಕ

ಕರ್ನಾಟಕ ರಾಜಕಾರಣದ ಇತಿಹಾಸದಲ್ಲಿ ಅರ್ಥಚಿಂತನೆ ನಡೆಸಿದವರ ಪೈಕಿ ಅರಸು ಅವರು ಪ್ರಮುಖರು. ಅವರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕವಾಗಿ ಕ್ರಾಂತಿಕಾರಕ ಬೆಳವಣಿಗೆಯನ್ನು ತರುವುದರ ಜೊತೆಗೆ, ಆರ್ಥಿಕ ಅಭಿವೃದ್ಧಿ ಕ್ಷೇತ್ರಕ್ಕೂ ಹೆಚ್ಚು ಮಹತ್ವ ನೀಡಿದ್ದಾರೆ. ಕರ್ನಾಟಕದ ಅಭಿವೃದ್ಧಿಯಲ್ಲಿ ಶತಮಾನಗಳಿಂದಲೂ ಅನೇಕ ಸಮಸ್ಯೆಗಳು ಕಂಡುಬಂದರೂ, ಅಂಥ ಆರ್ಥಿಕ ಸಮಸ್ಯೆಯನ್ನು ಸುಧಾರಿಸುವಲ್ಲಿ ತಕ್ಕ ಪ್ರಯತ್ನ ಮಾಡಿದವರಾಗಿದ್ದಾರೆ. ಇವರು ಸಾಮಾಜಿಕ ವ್ಯವಸ್ಥೆಯಲ್ಲಿರುವ ಬಡರೈತಾಪಿ ಜನರು, ಶೋಷಿತ ವರ್ಗ ಮತ್ತು ಅಸಂಘಟಿತ ಕಾರ್ಮಿಕರ ಆರ್ಥಿಕ ಸಂಕಷ್ಟಗಳನ್ನು ಪರಿಹರಿಸುವಲ್ಲಿ ಶ್ರಮಿಸಿದವರು.

ನಾಡನ್ನು ಆರ್ಥಿಕವಾಗಿ ಬಲಪಡಿಸಲು ಬಡತನ ನಿರ್ಮೂಲನಾ ಯೋಜನೆ, ಕಿರು ಮತ್ತು ಮಧ್ಯಮ ಗಾತ್ರದ ನೀರಾವರಿ ಯೋಜನೆಗಳು, ಒಣಭೂಮಿ ಬೇಸಾಯಕ್ಕೆ ಪ್ರೋತ್ಸಾಹ, ಕೈಗಾರಿಕಾ ವಿಕೇಂದ್ರಿಕರಣ, ಗೃಹಕೈಗಾರಿಕೆ, ಸಣ್ಣ ಪ್ರಮಾಣದ ಕೈಗಾರಿಕೆ ಹಾಗೂ ಹಿಂದುಳಿದ ಪ್ರದೇಶಗಳ ಅಭಿವೃದ್ಧಿ ಇಂಥ ಹಲವಾರು ಯೋಜನೆಗಳನ್ನು ಅನುಷ್ಠಾನಕ್ಕೆ ತಂದರು. ಕೇವಲ ವ್ಯವಸಾಯದಿಂದಲೇ ನಮ್ಮ ದೇಶ ಅಭಿವೃದ್ಧಿ ಹೊಂದಲಿಕ್ಕೆ ಸಾಧ್ಯವಿಲ್ಲ. ಆದ್ದರಿಂದ ಕೃಷಿಯ ಜೊತೆಯಲ್ಲಿ ಕೈಗಾರಿಕೆಗಳು ಬೆಳವಣಿಗೆಯಾಗಬೇಕು. ಭೂಮಿಯಲ್ಲಿನ ಉತ್ಪಾದನೆ ಮತ್ತು ಕೈಗಾರಿಕೆ ಬೆಳವಣಿಗೆಯ ಜೊತೆಯಲ್ಲಿ ಇವೆರಡರ ನಡುವಿನ ಸಂಬಂಧದ ಆರ್ಥಿಕ ವ್ಯವಹಾರಗಳನ್ನು ನೋಡಿಕೊಳ್ಳತಕ್ಕಂಥ ದಕ್ಷತೆಯಿರುವ ಜನ ಬೇಕು ಎನ್ನುವ ಮಾತನ್ನು ಒತ್ತಿ ಹೇಳಿದ ಅರಸು ಅವರ ವಿಚಾರಧಾರೆ ಈ ನಿಟ್ಟಿನಲ್ಲಿ ಇತರರಿಗಿಂತ ಭಿನ್ನವಾಗಿತ್ತು. ನಮ್ಮ ದೇಶದಲ್ಲಿರುವ ನೈಸರ್ಗಿಕ ಸಂಪನ್ಮೂಲ ಹಾಗೂ ಜನತೆಯ ಬುದ್ಧಿವಂತಿಕೆಯನ್ನು ಉಪಯೋಗಿಸಿಕೊಂಡು ಆ ಮೂಲಕ ನಾಡನ್ನು ಅಭಿವೃದ್ಧಿಗೊಳಿಸಬೇಕೆನ್ನುವ ಸಿದ್ಧಾಂತಕ್ಕೆ ಬದ್ಧರಾಗಿದ್ದ ಅರಸು ಅವರು ಕೈಗಾರಿಕಾ ಕ್ಷೇತ್ರವನ್ನು ಅಭಿವೃದ್ಧಿ ಪಡಿಸಲು ಮಾರ್ಗದರ್ಶನ ನೀಡಿದರು. ಉತ್ಪತ್ತಿ, ದುಡಿಮೆ, ಪ್ರತಿಫಲ, ಇವುಗಳ ಬಗ್ಗೆ ನಮ್ಮ ದೃಷ್ಟಿಕೋನ ಬದಲಾಗಬೇಕೆನ್ನುವ ಅರಸು ಅವರು ತುಂಬ ಪ್ರಾಯೋಗಿಕವಾಗಿ ಯೋಚನೆ ಮಾಡಿ ಪ್ರತಿಯೊಂದು ಸಮಸ್ಯೆಗೂ ಪ್ರಾಯೋಗಿಕವಾಗಿಯೇ ಪರಿಹಾರ ಕಂಡುಹಿಡಿಯುತ್ತಿದ್ದರು.

ಒಂದು ದೇಶದ ಆರ್ಥಿಕ ವ್ಯವಸ್ಥೆಯ ಅಭಿವೃದ್ಧಿಯಲ್ಲಿ ಕೈಗಾರಿಕಾ ಕೇಂದ್ರಗಳು ಹೆಚ್ಚು ಮಹತ್ವದ ಪಾತ್ರವಹಿಸುತ್ತವೆ ಎನ್ನುವುದನ್ನು ಮನಗಂಡಿದ್ದ ಅರಸು ಅವರು ವಿವಿಧ ರೀತಿಯ ಕೈಗಾರಿಕೆ ಬೆಳವಣಿಗೆಗೆ ಅವಕಾಶ ಮಾಡಿಕೊಟ್ಟರು. ಅವುಗಳಲ್ಲಿ ಖಾಸಗಿ ಕ್ಷೇತ್ರದ ಕೈಗಾರಿಕೆ, ಸರ್ಕಾರದ ವತಿಯಿಂದ ಸ್ಥಾಪನೆಯಾದ ಕೈಗಾರಿಕೆ, ಸಹಕಾರ ಕ್ಷೇತ್ರದಿಂದ ಸ್ಥಾಪನೆಯಾದ ಕೈಗಾರಿಕೆ, ಸಂಯುಕ್ತ

ಕ್ಷೇತ್ರದ ಕೈಗಾರಿಕೆ (ಸಹಕಾರ ಮತ್ತು ಖಾಸಗಿ. ಬಂಡವಾಳ ಹೂಡಿಕೆದಾರರು)ಗಳು ಬೆಳವಣಿಗೆಯಾಗಬೇಕು. ಇದು ಕೇವಲ ಕರ್ನಾಟಕ ರಾಜ್ಯದಲ್ಲಿ ಮಾತ್ರವಷ್ಟೇ ಅಲ್ಲದೆ ಇಡೀ ಭಾರತದಲ್ಲಿ ಕೈಗಾರಿಕಾ ವಲಯ ಅಭಿವೃದ್ಧಿಯಾಗಬೇಕು.

ಅರಸು ಆರ್ಥಿಕವಾಗಿ ಹಿಂದುಳಿದವರಿಗೆ ಗ್ರಾಮೀಣ ಪ್ರದೇಶಗಳಲ್ಲಿ ವಸತಿ ಸೌಲಭ್ಯಗಳನ್ನು ಹಂಚುವುದರ ಮೂಲಕ ಗ್ರಾಮೀಣ ಅಭಿವೃದ್ಧಿಗೆ ಕಾರಣರಾದರು. ಗ್ರಾಮೀಣ ಅಭಿವೃದ್ಧಿ ಹಿಂದುಳಿದ ವರ್ಗದವರ ಹಾಗೂ ಮಹಿಳೆಯರ ಅಭಿವೃದ್ಧಿಗಾಗಿ ಕರ್ನಾಟಕದಲ್ಲಿ ಮೊಟ್ಟಮೊದಲ ಬಾರಿಗೆ ಕಾರ್ಯಕ್ರಮಗಳನ್ನು ಹಾಕಿಕೊಂಡು ಅವುಗಳನ್ನು ಅನುಷ್ಠಾನಗೊಳಿಸಿದ ಕೀರ್ತಿ ಅರಸು ಅವರಿಗೆ ಸಲ್ಲುತ್ತದೆ. ಕರ್ನಾಟಕವು ಇಂದು ಈ ಮಟ್ಟದ ಪ್ರಗತಿಯನ್ನು ಸಾಧಿಸುವಲ್ಲಿ ಅವರ ಸರ್ಕಾರದ ಕೊಡುಗೆ ಅಪಾರ. ಇದನ್ನು ಈ ಕೆಳಗಿನ ಅಂಶಗಳಿಂದ ಇನ್ನಷ್ಟು ಗಟ್ಟಿಗೊಳಿಸಬಹುದು.

### ೫.೧. ಕಿರು ಮತ್ತು ಮಧ್ಯಮಗಾತ್ರದ ನೀರಾವರಿ ಯೋಜನೆ 

ಅರಸು ಅವರು ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡ ನಂತರ ರಾಜ್ಯವನ್ನು ಆರ್ಥಿಕವಾಗಿ ಬಲಪಡಿಸಲು ಹಲವಾರು ಯೋಜನೆಗಳನ್ನು ಕೈಗೊಂಡರು. ಅವುಗಳಲ್ಲಿ ಮುಖ್ಯವಾದದ್ದು ನೀರಾವರಿ ಯೋಜನೆ. ಈ ಯೋಜನೆಯಿಂದ ಆದಷ್ಟು ಬೇಗ ಹೆಚ್ಚು ಕೃಷಿ ಭೂ ಪ್ರದೇಶಕ್ಕೆ ವಿಪುಲವಾಗಿ ನೀರಾವರಿ ಸೌಲಭ್ಯವನ್ನು ಒದಗಿಸುವುದು ಅರಸು ಅವರ ಮಹತ್ತರ ಆಶಯವಾಗಿತ್ತು. ಕೃಷಿ ಮತ್ತು ಕೈಗಾರಿಕಾ ಕ್ಷೇತ್ರಗಳು ಆರ್ಥಿಕ ಅಭಿವೃದ್ಧಿಯಲ್ಲಿ ವಹಿಸುವ ಮಹತ್ವದ ಪಾತ್ರವನ್ನು ಮನಗಂಡು ಸರ್ಕಾರ ಆ ವರ್ಷದಲ್ಲಿ (೧೯೭೩-೭೪) ರಾಜ್ಯದ ಅಭಿವೃದ್ಧಿ ಚಟುವಟಿಕೆಗಳಿಗೆ ಮೀಸಲಾಗಿರಿಸಿದ್ದು ಒಟ್ಟು ೧೫೫ ಕೋಟಿ. ಈ ಕೋಟಿ ರೂಪಾಯಿಗಳಲ್ಲಿ ಅರ್ಧಕ್ಕಿಂತಲೂ ಹೆಚ್ಚು ಹಣವನ್ನು ವಿದ್ಯುಚ್ಛಕ್ತಿ ಮತ್ತು ನೀರಾವರಿಗಾಗಿ ನಿಗದಿ ಮಾಡಿತ್ತು. ಈ ಅವಧಿಯಲ್ಲಿ ಭಾರಿ ನೀರಾವರಿ ಯೋಜನೆಗಳಿಗಾಗಿ ೧೦೦ ಕೋಟಿ ರೂಪಾಯಿಗಳಿಗೂ ಹೆಚ್ಚು ವೆಚ್ಚ ಮಾಡಲಾಯಿತು. ಸಣ್ಣ ನೀರಾವರಿಗೆ ೭೦ ಕೋಟಿ ರೂಪಾಯಿ ಹಾಗೂ ಬಾವಿಗಳು ಮತ್ತು ಪಂಪ್‌ಸೆಟ್‌ಗಳಿಗೆ ೨೭ ಕೋಟಿ ರೂಪಾಯಿಗಳನ್ನು ವಿನಿಯೋಗಿಸಲಾಗಿತ್ತು. ಈ ರೀತಿಯಾಗಿ ಅಪಾರವಾದ ಹಣವನ್ನು ವ್ಯಯ ಮಾಡಿ ಹೆಚ್ಚು ಭೂಪ್ರದೇಶಕ್ಕೆ ನೀರಿನ ಸೌಲಭ್ಯವನ್ನು ಒದಗಿಸಿದರು.

ಮಳೆಯನ್ನೇ ಆಶ್ರಯಿಸಿದ್ದ ಕೃಷಿಕನಿಗೆ ಈ ಸಣ್ಣ ಮತ್ತು ಮಧ್ಯಮ ಗಾತ್ರದ ನೀರಾವರಿ ಯೋಜನೆಯಿಂದ ಆತನು ಹಗಲಿರುಳು ಕೃಷಿ ಚಟುವಟಿಕೆಯಲ್ಲೇ ತೊಡಗುವಂತಾಯಿತು. ೧೯೭೪ರಲ್ಲಿ ನವಿಲುತೀರ್ಥ ಯೋಜನೆ (ಮಲಪ್ರಭಾ) ಜಾರಿಗೆ ತಂದು ಸುಮಾರು ಹೆಕ್ಟರ್ ಪಾಳುಬಿದ್ದ ಕೃಷಿ ಭೂಮಿಗೆ ನೀರನ್ನು ಒದಗಿಸಿದರು. ಹೀಗಾಗಿ ರೈತರು ವಾರ್ಷಿಕ ಎರಡು ಬೆಳೆಯನ್ನು ತೆಗೆಯಲು ಅನುಕೂಲ ಮಾಡಿಕೊಟ್ಟರು. ಒಟ್ಟು ಕೃಷಿ ಭೂಮಿಯಲ್ಲಿ ಶೇ.೧೬ ಭಾಗಕ್ಕೆ ನೀರನ್ನು ಒದಗಿಸಿದ್ದು ಇವರು ಕೃಷಿಗೆ ನೀಡಿದ ಮಹತ್ವವನ್ನು ಬಿಂಬಿಸುತ್ತದೆ.

ಹರಿದು ವ್ಯರ್ಥವಾಗಿ ಹೋಗುವ ನೀರನ್ನು ಓಡಿದು ನಿಲ್ಲಿಸಿ, ಈ ನೀರನ್ನು ಸದುಪಯೋಗ ಪಡಿಸಿಕೊಂಡು ಭೂಮಿಯನ್ನು ಪೈರುಪಚ್ಚೆಗಳಿಂದ ಕೂಡಿ ಹಚ್ಚ ಹಸಿರಾಗುವಂತೆ ಮಾಡಿದರು. ಇದರಿಂದಾಗಿ ರೈತರು ಹೆಚ್ಚು ಹೆಚ್ಚು ಕೃಷಿ ಬೆಳೆಗಳ ಉತ್ಪಾದನೆಯಲ್ಲಿ ತೊಡಗಿದರು. ಈ ಹಿಂದೆ ಆಹಾರ ಉತ್ಪಾದನೆಯಲ್ಲಿ ಹೆಚ್ಚಳವಾಗಿರಲಿಲ್ಲ. ಆದರೆ ಅರಸು ಒದಗಿಸಿದ ನೀರಾವರಿ ಸೌಲಭ್ಯದಿಂದ ಕೆಲವೇ ವರ್ಷಗಳಲ್ಲಿ, ವಾಣಿಜ್ಯ ಬೆಳೆಗಳಲ್ಲಿ, ಎಣ್ಣೆ ಬೀಜ, ಹತ್ತಿ, ಕಬ್ಬು, ಬತ್ತದ ಉತ್ಪಾದನೆಯಲ್ಲಿ ಹೆಚ್ಚಾಯಿತು. ಕಾಳಿನದಿ ಜಲವಿದ್ಯುತ್ ಯೋಜನೆ ಮತ್ತು ನಾಗಜರಿ ಯೋಜನೆಯ ವಿದ್ಯುತ್ ಸರಬರಾಜಿನಿಂದ ನಾಡಿಗೆ ವಿದ್ಯುತ್‌ನ್ನು ಹರಿಸಿದ ಕೀರ್ತಿ ಅರಸು ಸರ್ಕಾರದ್ದಾಗಿದೆ. ಈ ಹಿಂದೆ ಉತ್ಪಾದನೆಯಾಗುತ್ತಿದ್ದ ೧೦೦೦ ಮೆಗಾವ್ಯಾಟ್ ವಿದ್ಯುತ್, ಕಾಳಿನದಿ ಯೋಜನೆಯಿಂದ ಹಿಂದಿನಕ್ಕಿಂತಲೂ ಎರಡರಷ್ಟು ಹೆಚ್ಚು ವಿದ್ಯುತ್ ಉತ್ಪಾದನೆಯಾಗಲಿದೆ. ಇದರಿಂದಾಗಿ ರೈತರು ನೀರೇ ಇಲ್ಲದ ತಮ್ಮ ಹೊಲಗದ್ದೆಗಳಿಗೆ ಪಂಪಸೆಟ್ ಹಾಕಿಸಿಕೊಂಡು ನೀರಿನ ಅನುಕೂಲ ಪಡೆಯತೊಡಗಿದರು. ಈ ಯೋಜನೆಗೆ ಸುಮಾರು ೫೦ ಕೋಟಿ ರೂಪಾಯಿ ಖರ್ಚಾಗಿದ್ದು, ನಾವು ಒದಗಿಸುವ ಹಣದ ಜೊತೆಗೆ ವಿದೇಶಗಳಿಂದ ಸಾಲ ಪಡೆಯುವ ನಿರೀಕ್ಷೆ ಇದೆ.

ಈ ಯೋಜನೆಯ ಪ್ರಕಾರ ಕಾಳಿನದಿ ಮತ್ತು ಅದರ ಶಾಖೆಗಳ ನೀರನ್ನು ಉಪಯೋಗಿಸಿ ಜಲವಿದ್ಯುತ್ ಶಕ್ತಿಯನ್ನು ಉತ್ಪಾದಿಸಲು ಆಣೆಕಟ್ಟುಗಳನ್ನು, ಸುರಂಗ ಮಾರ್ಗಗಳನ್ನು ಹಾಗೂ ವಿದ್ಯುತ್‌ಕೇಂದ್ರಗಳನ್ನು ನಿರ್ಮಿಸಲಾಗುತ್ತದೆ. ಈ ಯೋಜನೆಯಿಂದ ದೊಡ್ಡ ಮತ್ತು ಸಣ್ಣ ಪ್ರಮಾಣದ ಒಟ್ಟು ೧೦ ಆಣೆಕಟ್ಟುಗಳನ್ನು ಕಟ್ಟಲು ಸರ್ಕಾರ ಕಾರ್ಯಕೈಗೊಂಡಿತು. ಅವುಗಳಲ್ಲಿ ಐದು ಕಾಳಿ ನದಿಯ ಮೇಲೂ ಮತ್ತು ಉಳಿದ ಐದು ಅದಕ್ಕೆ ಸೇರುವ ಉಪನದಿಗಳ ಮೇಲೂ ರಚಿಸಬೇಕಾಗಿದೆ. ಈ ಉಪನದಿಗಳು ತಳಹಬ್ಬಿ, ಕಾವೇರಿ ಮತ್ತು ವಾಕಿನದಿಗಳು ಈ ನದಿಗಳ ನೀರನ್ನು ಸಾಗಿಸಲು ೨೫ ಕಿ.ಮೀ. ಉದ್ದದ ಸುರಂಗ ಮಾರ್ಗಗಳನ್ನು ರಚಿಸುವುದು ಇನ್ನೊಂದು ವೈಶಿಷ್ಟ್ಯವಾಗಿದೆ. ಈ ರೀತಿ ಗ್ರಾಮಾಂತರ ಪ್ರದೇಶಗಳಿಗೆ ಮತ್ತು ಕೃಷಿ ಭೂಮಿಗೆ ವಿದ್ಯುತ್ ಸೌಕರ್ಯ ಒದಗಿಸಿ ಮತ್ತು ಕೃಷಿ ವ್ಯವಸಾಯವನ್ನು ಅಭಿವೃದ್ಧಿಪಡಿಸುವುದರೊಂದಿಗೆ ನಾಡನ್ನು ಆರ್ಥಿಕ ಪ್ರಗತಿಯತ್ತ ಕೊಂಡೊಯ್ಯುವಲ್ಲಿ ದಿಟ್ಟ ಹೆಜ್ಜೆ ಇಟ್ಟವರು ದೇವರಾಜ ಅರಸು ಅವರಾಗಿದ್ದಾರೆ.

## ೫.೨. ಹರಿಜನ-ಗಿರಿಜನರಿಗೆ ಪ್ರತ್ಯೇಕ ಕಾರ್ಪೋರೇಷನ್ ಸ್ಥಾಪನೆ

ಹರಿಜನ ಮತ್ತು ಗಿರಿಜನರ ಕಲ್ಯಾಣಕ್ಕಾಗಿಯೇ ಪ್ರತ್ಯೇಕ ಕಾರ್ಪೋರೇಷನ್ ಸ್ಥಾಪನೆ ಮಾಡಿದ ಅರಸುರವರು ಮೊದಲು ಈ ವರ್ಗದ ಜನರನ್ನು ಆರ್ಥಿಕವಾಗಿ ಬಲಪಡಿಸಲು ಮುಂದಾದರು. ಇದರ ಮುಖ್ಯ ಉದ್ದೇಶ ಹರಿಜನ-ಗಿರಿಜನರಿಗೆ ಉದ್ಯೋಗ ಕಲ್ಪಿಸುವುದು. ವ್ಯವಸಾಯದ ಅಭಿವೃದ್ಧಿಗೋಸ್ಕರ ಹಣ ಒದಗಿಸತಕ್ಕಂಥದ್ದು ಮತ್ತು ಸಣ್ಣ ಪುಟ್ಟ ಕೈಗಾರಿಕೆಗಳನ್ನು ಸ್ಥಾಪನೆ ಮಾಡತಕ್ಕಂಥದ್ದು. ಕೈಮಗ್ಗ ವನ್ನು ಅವಲಂಬಿಸಿರುವ ಸುಮಾರು ಎಂಟು ಲಕ್ಷ ಜನರ ಜೀವನ ಸುಧಾರಣೆಗಾಗಿ ಇತ್ತ ಕೈಮಗ್ಗ ಅಭಿವೃದ್ಧಿ ಕಾರ್ಪೋರೇಷನ್, ಕೊಳಚೆ ಪ್ರದೇಶದ ನಿವಾರಣೆಗಾಗಿ ಅತ್ತ ಕೊಳಚೆ ನಿರ್ಮೂಲನ

ಮಂಡಳಿ ರಚಿತವಾಗಿದೆ. ಅಲ್ಲದೆ ಕುರಿ ಸಂಗೋಪನೆ ಮತ್ತು ಅಭಿವೃದ್ಧಿ ಮಂಡಳಿಯ ರಚನೆಯಿಂದ ರಾಜ್ಯದ ಉಣ್ಣೆ ಕೆಲಸಗಾರರಿಗೆ ಮತ್ತು ಕುರಿ ಸಾಕುವ ರೈತರಿಗೆ ಈ ಸೌಲಭ್ಯ ದೊರೆಯುತ್ತಿರುವುದು ದೇಶದಲ್ಲಿ ಇದೇ ಮೊದಲು. ಹೀಗೆ ಒಟ್ಟಿನಲ್ಲಿ "ಈ ಜನರ ಆರ್ಥಿಕ ಏಳಿಗೆಗಾಗಿ ಯಾವ, ಯಾವ ಕ್ಷೇತ್ರದಲ್ಲಿ ನಿರತರಾಗಿರುವುದಕ್ಕೆ ಸಾಧ್ಯವೋ ಆ ಎಲ್ಲ ಕಾರ್ಯ ಚಟುವಟಿಕೆಗಳನ್ನು ಈ 'ಕಾರ್ಪೋರೇಷನ್ ಸ್ಥಾಪನೆ' ಮಾಡುವ ಮುಖಾಂತರ ಬಡ ಜನತೆಯನ್ನು ಹಾಗೂ ರಾಜ್ಯವನ್ನು ಆರ್ಥಿಕವಾಗಿ ಬಲಪಡಿಸಬೇಕೆಂಬುದು ದೇವರಾಜ ಅರಸು ಅವರ ಬಯಕೆಯಾಗಿತ್ತು."[೧]

ನಾಲ್ಕನೇ ಪಂಚವಾರ್ಷಿಕ ಯೋಜನೆಯನ್ನು ಪೂರೈಸಿ ೫ನೇ ಪಂಚವಾರ್ಷಿಕ ಯೋಜನೆ ಕಾಲದ ಸಂದರ್ಭದ ವೇಳೆಯಲ್ಲಿ ಸಾವಿರಾರುಕೋಟಿ ಹಣವನ್ನು ಅನೇಕ ಅಭಿವೃದ್ಧಿ ಕಾರ್ಯಗಳಿಗೆ ಖರ್ಚು ಮಾಡಿದರು. ಹರಿಜನ-ಗಿರಿಜನರಿಗಾಗಲಿ, ಬಡವರಿಗಾಗಲಿ, ಹಿಂದುಳಿದ ವರ್ಗದವರಿ ಗಾಗಲಿ, ದೀನದಲಿತರಿಗಾಗಲಿ ಸರ್ಕಾರ ಮಾಡಿರುವ ಎಲ್ಲಾ ಕಾರ್ಯಗಳ ಪೂರ್ಣಪ್ರತಿಫಲ ದೊರಕಿದೆಯೇ ಎನ್ನುವ ಗುಮಾನಿ ಇದೆ. ಇದರ ಬಗ್ಗೆ ನಾವು ಅಂಕಿ-ಅಂಶಗಳನ್ನು ತೆಗೆದು ನೋಡಿದಾಗ ಅದು ದೊರೆಯದಿರುವುದು ತಕ್ಕಮಟ್ಟಿಗೆ ಆರ್ಥಿಕ ತಜ್ಞರು, ರಾಜಕೀಯ ಮುಖಂಡರಿಂದ (ತಜ್ಞರಿಂದ) ಸ್ಪಷ್ಟವಾಗುತ್ತದೆ. ಕೇವಲ ಪ್ರಬಲ ವರ್ಗದವರ ಕೈವಾಡ ಇರುವ ರಾಜಕೀಯ ಮುಖಂಡರಿಂದ ಅನೇಕ ಪ್ರತಿಭಟನೆಗಳು ಕಾರಣವಾಗಿವೆ. ಎಲ್ಲಾ ವರ್ಗಕ್ಕೆ ಸೇರಬೇಕಾದ ಯೋಜನೆಗಳನ್ನು ತಾವೆ ತಮ್ಮ ಕೈತುಂಬ ಹಿಡಿದುಕೊಂಡಿದ್ದಾರೆ. ಹೀಗಾಗಿ ಶ್ರೀಮಂತ ಬಂಡವಾಳಶಾಹಿಗಳಿಂದ ಬಡಜನತೆಯನ್ನು ರಕ್ಷಿಸುವುದಕ್ಕೋಸ್ಕರ ಹರಿಜನ-ಗಿರಿಜನರಿಗಾಗಿ ಪ್ರತ್ಯೇಕ ಕಾರ್ಪೋರೇಷನ್ ರಚಿಸುವ ಮುಖಾಂತರ ಆರ್ಥಿಕವಾಗಿ ಬಲಹೀನವಾದ ಕುಟುಂಬಗಳ ವರ್ಗಗಳಿಗೆ, ಸಾಮಾಜಿಕವಾಗಿ ಬಳಲಿದ ವರ್ಗಗಳಿಗೆ, ಸಮಾಜದಿಂದ ಬಹುಕಾಲದಿಂದಲೂ ದೂರ ಇರುವಂಥ ಜನರಿಗೆ ಸಾಮಾಜಿಕ, ಆರ್ಥಿಕ ನ್ಯಾಯವನ್ನು ಒದಗಿಸಿಕೊಟ್ಟದ್ದು ಅರಸು ಸರ್ಕಾರದ ಸಾಧನೆಯೇ ಸರಿ. ಸಹಕಾರ ಸಂಘಗಳ ಮೂಲಕ ಹರಿಜನ-ಗಿರಿಜನರಿಗೆ ಮತ್ತು ಆರ್ಥಿಕವಾಗಿ ಹಿಂದುಳಿದವರಿಗೆ ಅಲ್ಪಾವಧಿ ಸಾಲ, ಮಧ್ಯಾವಧಿಸಾಲ, ಧೀರ್ಘಾವಧಿ ಸಾಲವನ್ನು ಒದಗಿಸಿದರು. ಇದರಿಂದಾಗಿ ಅವರು ಯಾವುದೇ ಉದ್ಯೋಗದಲ್ಲಿ ತೊಡಗಲು ಸಹಾಯಕವಾಯಿತು. ಒಟ್ಟಿನಲ್ಲಿ ಬಹುಸಂಖ್ಯಾತರಾದ ಹಿಂದುಳಿದ ಬಡಜನತೆಯ ಸಮಸ್ಯೆಗಳನ್ನು ಬಗೆಹರಿಸದೆ ರಾಜ್ಯದ ಆರ್ಥಿಕಸ್ಥಿತಿ ಸುಧಾರಿಸದು ಎಂಬುದನ್ನು ಮನಗಂಡಿದ್ದ ಅರಸುರವರು ಅವರಿಗಾಗಿ ಈ ಮೇಲಿನ ಯೋಜನೆಯನ್ನು ಕೈಗೊಂಡು ರಾಜ್ಯದ ಆರ್ಥಿಕ ಸ್ಥಿತಿಯನ್ನು ಸುಧಾರಿಸುವಲ್ಲಿ ಯಶಸ್ವಿಯಾದರು.

### ೫.೩. ಒಣಭೂಮಿ ಬೇಸಾಯಕ್ಕೆ ಪ್ರೋತ್ಸಾಹ

ಒಣಭೂಮಿಯನ್ನು ಕೃಷಿಗೆ ಯೋಗ್ಯ ಭೂಮಿಯನ್ನಾಗಿ ಮಾಡಿ, ಸಾಗುವಳಿ ಮಾಡಲು ಸುಮಾರು ಹೆಕ್ಟರ್ ಪಾಳುಬಿದ್ದ ಭೂಮಿಯನ್ನು ಜಲಭಿವೃದ್ಧಿ ಯೋಜನೆ ಕಾಯ್ದೆಯನ್ನು ಜಾರಿಗೆ ತರುವ ಮುಖಾಂತರ ಕೆರೆ, ಕಾಲುವೆ, ಬಾವಿಯನ್ನು ನಿರ್ಮಿಸಿದರು. ಇದರಿಂದ ರೈತರಿಗೆ ಕೃಷಿ

ಚಟುವಟಿಕೆಗಳಲ್ಲಿ ತೊಡಗಲು ಸಹಾಯಕವಾದಂತಾಗಿ, ಇಂತಹ ಪಾಳುಬಿದ್ದ ಬಂಜರು ಭೂಮಿಗೆ ನೀರನ್ನು ಒದಗಿಸಿಕೊಟ್ಟದ್ದು, ಅರಸು ಅವರ ಸರ್ಕಾರದ ಸಾಧನೆಯಾಗಿದೆ. ಈ ನೀರಾವರಿ ಯೋಜನೆಯಿಂದ ಸುಮಾರು ಕೃಷಿ ಕುಟುಂಬಗಳು ಈವರೆಗೆ ದೂಡಿದ್ದ ನಿರಾಶದಾಯಕ ದಿನಗಳು ಈ ಯೋಜನೆಯಿಂದ ಕೊನೆಗೊಂಡವು. ಈ ಬಂಜರು ಭೂಮಿಯನ್ನು ಸಾಗುವಳಿಗೆ ಯೋಗ್ಯಭೂಮಿಯನ್ನಾಗಿ ಮಾಡುವ ಮೂಲಕ ಕೃಷಿಭೂಮಿ ಪ್ರದೇಶವನ್ನು ವಿಸ್ತರಿಸಿದಂತಾಯಿತು. ಈ ರೀತಿ ಸುಮಾರು ವರ್ಷಗಳಿಂದ ಜಾಲಿಮುಳ್ಳು, ಕಲ್ಲುಗಳಿಂದ ತುಂಬಿ ಸಾಗುವಳಿ ಮಾಡದೆ ಪಾಳುಬಿದ್ದ ಅಂಥ ವಿಶಾಲ ಭೂಪ್ರದೇಶವನ್ನು ಆಧುನಿಕ ಯಂತ್ರೋಪಕರಣಗಳಿಂದ ಅದನ್ನು ಸ್ವಚ್ಛಗೊಳಿಸಿ ಕೃಷಿಗೆ ಯೋಗ್ಯಭೂಮಿಯನ್ನಾಗಿ ಸಾಗುವಳಿ ಮಾಡಲು ಸಹಾಯಕವಾಗುವಂತೆ ಮಾಡಿದರು.

ರಾಜ್ಯದಲ್ಲಿ ನಿರುದ್ಯೋಗವನ್ನು ಹೋಗಲಾಡಿಸುವುದು ಮತ್ತು ಜನಸಂಖ್ಯೆಯಲ್ಲಿ ನಿಧಾನವಾಗಿ ಹೆಚ್ಚಳವಾಗುತ್ತಿರುವುದನ್ನು ಅಲ್ಲದೆ ಕೃಷಿ ಉತ್ಪನ್ನಗಳ ಬೇಡಿಕೆಯಲ್ಲಿ ಅಧಿಕ್ಯ ಇವುಗಳಿಂದ ಕೃಷಿಭೂಮಿಯ ವಿಸ್ತರಣೆಗೆ ಇಂಬು ದೊರಕಿತು. ಅಂದು ಬೇಸಾಯ ಮಾಡದೆ ಪುಕ್ಕಟೆಯಾಗಿ ಖಾಲಿಬಿದ್ದ ಭೂಮಿಯನ್ನು ಸಾಗುವಳಿ ಮಾಡಲು ಹಿಂದುಳಿದ ವರ್ಗಗಳು, ಬಡಜನತೆ, ದಲಿತರು, ಹೆಚ್ಚು ಆಸಕ್ತಿ ತೋರಿಸುತ್ತಿದ್ದರು. ಇದನ್ನು ಮನಗಂಡ ಅರಸು ಸರ್ಕಾರದ ವತಿಯಿಂದ ರೈತರಿಗೆ ಕಡಿಮೆ ಬಡ್ಡಿಯಲ್ಲಿ ಸಾಲವನ್ನು ಒದಗಿಸಿಕೊಟ್ಟರು. ಜೊತೆಗೆ ಕೃಷಿ ತೆರಿಗೆಗಳ ವಿನಾಯಿತಿ ಮತ್ತು ಮತ್ತಿತರ ರಿಯಾಯಿತಿಗಳ ಅನುಕೂಲ ಮಾಡಿಕೊಟ್ಟು ಕೃಷಿಕ್ಷೇತ್ರವನ್ನು ಅಭಿವೃದ್ಧಿಪಡಿಸಿದರು. ಹೀಗಾಗಿ ಕೃಷಿಯಲ್ಲಿ ಉತ್ಪಾದನೆ ಹೆಚ್ಚಾಗತೊಡಗಿತು. ವಿಶೇಷವಾಗಿ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ, ಮಲೆನಾಡು ಪ್ರದೇಶಗಳಲ್ಲಿ ಸಾಂಬಾರು ಪದಾರ್ಥಗಳು (ಮೆಣಸು, ಏಲಕ್ಕಿ) ಬತ್ತ, ಅಡಿಕೆ, ತೆಂಗು, ಹೊಗೆಸೊಪ್ಪು, ಮೆಕ್ಕೆಜೋಳ, ರಾಗಿ, ಹತ್ತಿ, ಕಬ್ಬು, ಗೋಧಿ, ಅಡಿಕೆ, ತೆಂಗು ಮತ್ತು ತೋಟದ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹ ದೊರಕಿದಂತಾಯಿತು. ಈ ರೀತಿ ಕೃಷಿ ಕ್ಷೇತ್ರವನ್ನು ಅಭಿವೃದ್ಧಿಪಡಿಸಿ ನಾಡನ್ನು ಅಭಿವೃದ್ಧಿಪಡಿಸುವಲ್ಲಿ ಮಹತ್ವದ ಪಾತ್ರ ನಿರ್ವಹಿಸಿದರು.

## ೫.೪. ಗ್ರಾಮೀಣ ಮತ್ತು ಸಣ್ಣಕೈಗಾರಿಕೆಗಳು

"ಭಾರತವು ಸಂಪತ್ತಿನ ಮತ್ತು ಸಂಸ್ಕೃತಿಯ ಆಗರವಾಗಿತ್ತು" ಎಂದು ಎಡ್ವರ್ಡ್ ಥಸ್ಟರ್ನ್ ತನ್ನ 'ಹಿಸ್ಟರಿ ಆಫ್ ಬ್ರಿಟಿಷ್ ಎಂಪೈಯರ್ ಇನ್ ಇಂಡಿಯಾ'ದಲ್ಲಿ ಅಭಿಪ್ರಾಯಪಟ್ಟಿದ್ದಾರೆ.[೨] ಆಗಲೇ ಭಾರತದ ಕರಕುಶಲ ಸಾಮಗ್ರಿಗಳು ಭಾರತವನ್ನು ಆಕರ್ಷಣೀಯ ಕೇಂದ್ರವನ್ನಾಗಿಸಿದ್ದವು. ಇದಕ್ಕೆ ಕಾರಣ, ಭಾರತದ ಕೈಗಾರಿಕಾ ಕೇಂದ್ರಗಳಾಗಿದ್ದವು. ಹೀಗಾಗಿ ದೇವರಾಜ ಅರಸರು ಈ ಕೈಗಾರಿಕಾ ನೀತಿಯಿಂದಾಗಿ ಗ್ರಾಮೀಣ ಸಣ್ಣ ಕೈಗಾರಿಕೆಗಳಿಗೆ ವಿಶಿಷ್ಟ ಸ್ಥಾನವನ್ನು ಕಲ್ಪಿಸಿಕೊಟ್ಟರು. ಅದರಲ್ಲಿ ಗುಡಿ-ಗೃಹ ಕೈಗಾರಿಕೆಗಳು ಮತ್ತು ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಮಹತ್ವ ನೀಡಿದರು.

ಇದರಿಂದ ರಾಜ್ಯದಲ್ಲಿ ನಿರುದ್ಯೋಗದ ಸಮಸ್ಯೆಯನ್ನು ಹೋಗಲಾಡಿಸಿ, ಎಲ್ಲಾ ಗ್ರಾಮೀಣ ಕೂಲಿ ಕಾರ್ಮಿಕರಿಗೆ ಉದ್ಯೋಗ ಒದಗಿಸಿಕೊಟ್ಟರು. ಇಂತಹ ಕೈಗಾರಿಕೆಗಳು ಕೃಷಿ ಅಭಿವೃದ್ಧಿಗೆ ನೆರವು

ನೀಡುವುದಲ್ಲದೆ, ಜೊತೆಗೆ ಕೃಷಿ ಉತ್ಪನ್ನಗಳಿಗೆ ಮಾರುಕಟ್ಟೆಯನ್ನು ಒದಗಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತದೆ ಎನ್ನುವುದನ್ನು ಅರಸುರವರು ತಮ್ಮಲ್ಲಿ ಗಟ್ಟಿಗೊಳಿಸಿಕೊಂಡಿದ್ದರು. ಕೇವಲ ಅಲ್ಪ ಬಂಡವಾಳ ಮಾತ್ರವೆ ಈ ಸಣ್ಣ ಕೃಷಿ ಕೈಗಾರಿಕೆ ಸ್ಥಾಪನೆಗೆ ಸಾಕಾಗಿತ್ತು. ಮತ್ತು ಕೆಲಸ ಮಾಡುವ ಕಾರ್ಮಿಕರಿಗೆ ಶಿಕ್ಷಣ ಮತ್ತು ತರಬೇತಿ ಅಗತ್ಯತೆ ಬೇಕಿರಲಿಲ್ಲ ಈ ಕಾರಣಕ್ಕಾಗಿಯೇ ಅರಸರು ಇದಕ್ಕೆ ಮಹತ್ವ ನೀಡಿದರು. ಅಲ್ಲದೆ ಸ್ಥಳೀಯ ಸಂಪನ್ಮೂಲ ಬಳಸಿಕೊಂಡು ವಸ್ತುಗಳನ್ನು ಉತ್ಪಾದಿಸ ಬಹುದಾಗಿತ್ತು. ಹೀಗಾಗಿ ಗ್ರಾಮೀಣ ಜನತೆಯ ತಮ್ಮ ಸ್ವಉದ್ಯೋಗದಲ್ಲಿ ತೊಡಗುವಂತಾಯಿತು. ಪರಿಣಾಮವಾಗಿ ಗ್ರಾಮೀಣ ಬಡಜನತೆಯು ಉತ್ಪಾದನೆಯಲ್ಲಿ ಹೆಚ್ಚಳವಾಗಿ ಆದಾಯದ ಪ್ರಮಾಣ ದಲ್ಲಿಯೂ ಹೆಚ್ಚಾಯಿತು. ಒಟ್ಟಿನಲ್ಲಿ ಅಧಿಕ ಉದ್ಯೋಗಾವಕಾಶಗಳ ನಿರ್ಮಾಣ, ಸಮತೋಲನ ಪ್ರಾಂತೀಯ ಅಭಿವೃದ್ಧಿ ಮತ್ತು ಜನರ ಜೀವನ ಮಟ್ಟದ ಔನ್ನತ್ಯಗಳ ಮೂಲಕ ಸಣ್ಣ ಹಾಗೂ ಕೈಗಾರಿಕೆಗಳು ಸಮಾಜ ಗುಡಿ, ಸಣ್ಣ ಕೈಗಾರಿಕೆಗಳಿಗೆ ಹೆಚ್ಚು ಮಹತ್ವ ನೀಡಿದ ಅರಸುರವರು ಜನತೆಯ ಆರ್ಥಿಕಮಟ್ಟ ಸುಧಾರಿಸುವುದರೊಂದಗೆ ರಾಜ್ಯದ ಅಭಿವೃದ್ಧಿಗೂ ಕಾರಣವಾದರು.

## ೫.೫. ಜಲಾನಯನ ಅಭಿವೃದ್ಧಿಯ ಮಹತ್ವ

ನಮ್ಮದು ಕೃಷಿ ಪ್ರಧಾನ ದೇಶ. ನೀರಾವರಿ ಕ್ಷೇತ್ರ ಬಹಳ ಕಡಿಮೆಯಿದೆ. (ಶೇ. ೩೯) "ಕರ್ನಾಟಕದಲ್ಲಿ ಸುಮಾರು ಶೇ. ೭೪ರಷ್ಟು ಭೂಮಿ ಸಾಗುವಳಿ ಪ್ರದೇಶವು ಮಳೆ ಆಧಾರಿತವಾಗಿದೆ. ಕೇವಲ ಶೇ. ೨೬ರಷ್ಟು ಸಾಗುವಳಿ ಪ್ರದೇಶವು ನೀರಾವರಿ ಸೌಲಭ್ಯ ಹೊಂದಿದೆ. ಅದರಲ್ಲಿ ಕರ್ನಾಟಕವು ರಾಷ್ಟ್ರದಲ್ಲಿಯೇ ರಾಜಸ್ಥಾನದ ನಂತರ ಶುಷ್ಕ ಅಥವಾ ಅರೆ ಶುಷ್ಕ ವಾತಾವರಣದಲ್ಲಿ ಅತಿ ಹೆಚ್ಚಿನ ಭೂಮಿಯನ್ನು ಹೊಂದಿದ ರಾಜ್ಯವಾಗಿದೆ."[೩] ಜನ-ಜಾನುವಾರಗಳ ಸಂಖ್ಯೆ ಹೆಚ್ಚಳದಿಂದಾಗಿ ಪಶ್ಚಿಮ ಘಟ್ಟ ಹಾಗೂ ಅರಣ್ಯ ಪ್ರದೇಶಗಳು ಅತಿಕ್ರಮಣಕ್ಕೆ ತುತ್ತಾಗಿ ಅನಿರ್ಬಂಧಿತ ದನ ಮೇಯಿಸುವಿಕೆಯಿಂದ ಅರಣ್ಯ ನಾಶವಾಗುತ್ತದೆ. ಈ ರೀತಿಯ ಅರಣ್ಯನಾಶದಿಂದಾಗಿ ಗಿಡ-ಮರಗಳು ಕಾಣೆಯಾಗಿ ಮಣ್ಣು ಕೊಚ್ಚಿಕೊಂಡು ಹೋಗುತ್ತದೆ. ಮಳೆಯ ಪ್ರಮಾಣ ಕಡಿಮೆಯಾಗಿದೆ. ಇದನ್ನು ಮನಗಂಡ ಅರಸು ಅವರು ಜಲಾನಯನ ಅಭಿವೃದ್ಧಿ ಯೋಜನೆಯನ್ನು ಜಾರಿಗೊಳಿಸಿದರು.

ಮಣ್ಣು ಮತ್ತು ನೀರು ಕೃಷಿಯ ಜೀವಾಳ. ಇವು ಉತ್ಪಾದನೆಗೆ ಕಾರಣವಾಗುತ್ತವೆ ಎಂದು ಒತ್ತಿ ಹೇಳುತ್ತಿದ್ದರು. ಪ್ರತಿ ಹೆಕ್ಟರಿಗೆ ೧೬.೩೫ ಟನ್‌ನಷ್ಟು ಮಣ್ಣು ಪ್ರತಿವರ್ಷ ಕೊಚ್ಚಿಕೊಂಡು ಹೋಗುತ್ತದೆ ಎಂದು ಒಂದು ಮಹತ್ವದ ಅಧ್ಯಯನದಿಂದ ತಿಳಿದುಕೊಂಡಿದ್ದರು. ಇಷ್ಟು ಪ್ರಮಾಣದ ಮಣ್ಣಿನಲ್ಲಿಯೆ ಸಾರಜನಕ, ರಂಜಕ, ಪೊಟ್ಯಾಸ್‌ಗಳ ನಾಶವನ್ನು ಲೆಕ್ಕಹಾಕಿದರೆ ನಾವು ಪ್ರತಿವರ್ಷ ಸುಮಾರು ರೂ. ೨೦೦ ಕೋಟಿಯನ್ನು ಕಳೆದುಕೊಳ್ಳುತ್ತಿದ್ದೇವೆ ಎಂಬುದನ್ನು ರೈತರಿಗೆ ಮನಗಾಣಿಸಿ ಕೊಟ್ಟರು. ಈ ಭೂಸವೆತವು ವಿಷವರ್ತುಲವಾಗಿದೆ. ಈ ಸವೆತದಿಂದ ಮಣ್ಣು ಕೊಚ್ಚಿಕೊಂಡು ಹೋಗಿ ಕೆಳಮಟ್ಟದಲ್ಲಿರುವ ಭೂಮಿ ಮತ್ತು ಜಲಾಶಯಗಳಿಗೆ ಸಂಗ್ರಹವಾಗುತ್ತದೆ. ಇದರಿಂದ ಬೇರುಗಳಿಗಾಗಿ ಲಭ್ಯವಾಗುವ ಮಣ್ಣಿನ ಆಳ ಕುಗ್ಗುತ್ತದೆ. ಇಳುವರಿ ಕಡಿಮೆಯಾಗುತ್ತದೆ. ಒಂದು ಕಡೆಗೆ ಮೇಲ್ಮಣ್ಣು

ಕಡಿಮೆಯಾದರೆ ಇನ್ನೊಂದು ಕಡೆಗೆ ನೀರು ದುರ್ಬಲವಾಗುತ್ತದೆ. "ಮಣ್ಣಿದ್ದಲ್ಲಿ ನೀರು ಸಿಗುತ್ತಿಲ್ಲ, ನೀರಿದ್ದಲ್ಲಿ ಮಣ್ಣು ಲಭ್ಯವಿಲ್ಲ, ಅವು ಒಂದೊಂದಾಗಿ ಲಭ್ಯವಿದ್ದಲ್ಲಿ ಯಾವುದೇ ಪ್ರಯೋಜನವಾಗುತ್ತಿಲ್ಲ. ನೀರಿಲ್ಲದ ಮಣ್ಣು ಮರುಭೂಮಿ ಮತ್ತು ನೀರು ನಿಷ್ಪ್ರಯೋಜಕ"[೪] ಎಂದು ಎಚ್.ಎಚ್. ರೆಬೆಸಿಲ್ ಅಭಿಪ್ರಾಯಪಟ್ಟಿದ್ದಾರೆ. "ಅರಣ್ಯಗಳು ವಾಯುಮಂಡಲದ ಶ್ವಾಸಕೋಶಗಳೆಂದು" ಕರೆಯಲ್ಪಡುತ್ತವೆ. ಅವು ವಾತಾವರಣದಲ್ಲಿನ ಶಾಖವನ್ನು ಹೀರಿಕೊಂಡು ಮಳೆ ಸುರಿಯುವಂತೆ ಮಾಡುತ್ತವೆ ಎನ್ನುವ ನಿಟ್ಟಿನಲ್ಲಿ ವಿಚಾರ ಮಾಡಿದ ಅರಸುರವರು, ರೈತರು ಅರಣ್ಯದಲ್ಲಿನ ಗಿಡಮರಗಳನ್ನು ಕಡಿಯುವುದನ್ನು ನಿಲ್ಲಿಸಬೇಕೆಂದರು. "ನಮ್ಮಲ್ಲಿ ಅರಣ್ಯ ಈಗ ಕ್ಷೀಣಿಸಿದೆ. ಕಣ್ಣಲ್ಲಿ ನೋಡಲಿಕ್ಕಾದರೂ ಮುಂದಿನ ಪೀಳಿಗೆಗೆ ಸ್ವಲ್ಪ ಕಾಡನ್ನು ಬಿಟ್ಟು ಹೋಗೋಣ, ನೀವು ಓಟಾಕದಿದ್ದರೂ ಪರವಾಗಿಲ್ಲ. ನಾನಂತೂ ಇಂಥ ಆತ್ಮಘಾತುಕ ಕೆಲಸ ಮಾಡೋಲ್ಲ" ಎಂದು ವೃಕ್ಷ ಸಂರಕ್ಷಣೆಯ ಮಹತ್ವವನ್ನು ಜನತೆಗೆ ತಿಳಿಸಿಹೇಳಿದರು. ಅಂತೆಯೇ ಅರಣ್ಯ ಸಂರಕ್ಷಣೆ ಕಾಯ್ದೆಯನ್ನು ಜಾರಿಗೆ ತಂದರು. ಗಿಡಮರಗಳು ಮಳೆಯ ನೀರನ್ನು ತಡೆದು ಅಂತರ್‌ಜಲಮಟ್ಟ ಹೆಚ್ಚಿಸುತ್ತದೆ. ಇದರಿಂದಾಗಿ ಭೂಮಿಯ ಫಲವತ್ತತೆಯು ವೃದ್ಧಿಸುತ್ತದೆ. ಕಾಡು ಪ್ರಾಣಿ-ಪಕ್ಷಿಗಳ ವಸತಿಗಳಿಗೆ ಅನುಕೂಲ ಕಲ್ಪಿಸುತ್ತದೆ. ಪ್ರಕೃತಿಯ ಸಮತೋಲನ ಕಾಪಾಡುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೇ ಅವರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಬೀಟೆ ಮರಕ್ಕೆ ಉತ್ತಮ ಬೆಲೆಯ ವ್ಯವಸ್ಥೆಯನ್ನು ಮಾಡಿದರು. ಮತ್ತು ಅದರ ವ್ಯಾಪಾರಕ್ಕೊಂದು ಸ್ಪಷ್ಟರೂಪ ಕೊಡಿಸಿದರು. ರೋಸ್‌ವುಡ್, ಟಿಂಬರ್, ಟ್ರೇಡ್‌ಮನಾಪಲಿ ಅಂದರೆ ಬೀಟೆ ಮರದ ವ್ಯಾಪಾರದ ಏಕಸ್ವಾಮ್ಯ ಕಾನೂನನ್ನು ಮಾಡಿದರು. ಈ ಪ್ರಕಾರ ಬೀಟೆ ಮರ ಮಾರಾಟ ಮಾಡಬೇಕಾದರೆ ಸರ್ಕಾರಿ ಡಿಪೋನಲ್ಲೇ ಆಗಬೇಕು ಇದರಿಂದ ರೈತನಿಗಾಗುವ ನಷ್ಟ ಮತ್ತು ಕಳ್ಳಸಾಗಾಣಿಕೆಗೆ ಕಡಿವಾಣ ಹಾಕಿದರು.

ಒಟ್ಟಿನಲ್ಲಿ ನಾಡಿನ ಹಾಗೂ ರೈತರ ಸರ್ವತೋಮುಖ ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು ಈ ಯೋಜನೆಯನ್ನು ಕೈಗೊಂಡು ಜನತೆಯ ಸಮಸ್ಯೆಯನ್ನು ಹೋಗಲಾಡಿಸುವುದರೊಂದಿಗೆ, ನಾಡನ್ನು ಅಭಿವೃದ್ಧಿ ಪಥದತ್ತ ಕೊಂಡೊಯ್ಯುವ ನಿಟ್ಟಿನಲ್ಲಿ ಯೋಜನೆಯನ್ನು ಕೈಗೊಂಡ ಅರಸರವರ ಆರ್ಥಿಕ ಚಿಂತನೆಯು ದೂರದೃಷ್ಟಿಗೆ ಈ ಯೋಜನೆ ಸಾಕ್ಷಿಯಾಗಿದೆ.

## ೫.೬. ಔದ್ಯೋಗಿಕ ಕ್ಷೇತ್ರವನ್ನು ಕುರಿತು ಚಿಂತನೆ

ಆರ್ಥಿಕ ಅಭಿವೃದ್ಧಿಯಲ್ಲಿ ಕೈಗಾರಿಕೆ ಪ್ರಮುಖ ಪಾತ್ರವಹಿಸುತ್ತದೆ. ಅದಕ್ಕಾಗಿಯೇ ತೀವ್ರಗತಿಯ ಆರ್ಥಿಕ ಬೆಳವಣಿಗೆಗೆ ಪ್ರೋತ್ಸಾಹ ನೀಡಿದರು. ಅಂದು ರಾಜ್ಯದ ಅಭಿವೃದ್ಧಿಗೆ ತೀರ ಅವಶ್ಯಕವಾಗಿತ್ತು. ಆದ್ದರಿಂದ ಆರ್ಥಿಕ ಅಭಿವೃದ್ಧಿ ಮತ್ತು ಕೈಗಾರಿಕರಣ ಎಂಬ ಪದಗಳನ್ನು ಸಮಾನವಾಗಿ ಬಳಸುತ್ತಾರೆ. ವಿಶೇಷವಾಗಿ "ಅಭಿವೃದ್ಧಿಶೀಲ ರಾಷ್ಟ್ರಗಳ ಆರ್ಥಿಕ ಅಭಿವೃದ್ಧಿಗೆ ಕೈಗಾರಿಕಾ ಅಭಿವೃದ್ಧಿ ಅನಿವಾರ್ಯ. ಕೈಗಾರಿಕೀಕರಣವನ್ನು ಹೊಂದಿ ಅಥವಾ ನಾಶಹೊಂದಿ ಎಂಬ ಸರ್.ಎಂ. ವಿಶ್ವೇಶ್ವರಯ್ಯನವರ ಹೇಳಿಕೆ ಕೈಗಾರಿಕಾ ಅಭಿವೃದ್ಧಿಯ ಪ್ರಾಮುಖ್ಯತೆಯನ್ನು ತಿಳಿಸುತ್ತದೆ."[೨] ಅಸಿದ್ಧ ವಸ್ತುಗಳನ್ನು ಸಿದ್ಧವಸ್ತುಗಳನ್ನಾಗಿ

ಪರಿವರ್ತಿಸುವ ಕ್ರಿಯೆಗೆ ಕೈಗಾರಿಕೆ ಎಂದು ಹೆಸರು. "ಕೈಗಾರಿಕೆಯನ್ನು ಸ್ಥಾಪಿಸುವ ಮತ್ತು ಅಭಿವೃದ್ಧಿಪಡಿಸುವ ಕಾರ್ಯಕ್ಕೆ ಕೈಗಾರಿಕೀಕರಣ ಅಥವಾ ಔದ್ಯೋಗಿಕರಣ" ಎಂದು ಕರೆಯುತ್ತಾರೆ. ಕೈಗಾರಿಕೆಯು ಕೃಷಿ ತಳಪಾಯದ ಮೇಲೆ ಬೆಳೆಯಬೇಕಾಗಿರುವುದರಿಂದ ಕೈಗಾರಿಕೆಯನ್ನು ದ್ವಿತಿಯ ಕ್ಷೇತ್ರ ಎಂದು ಪರಿಗಣಿಸಲಾಗಿದೆ. ಆರ್ಥಿಕತೆಯ ಅಸ್ತಿತ್ವದ ದೃಷ್ಟಿಯಿಂದ ಕೈಗಾರಿಕೆಗೆ ಕೃಷಿಯ ನಂತರದ ದ್ವಿತೀಯ ಸ್ಥಾನ. ಇದರಿಂದಾಗಿಯೇ ದೇವರಾಜ ಅಗಸು ಔದ್ಯೋಗಿಕ ಕ್ಷೇತ್ರಕ್ಕೆ ಹೆಚ್ಚು ಮಹತ್ವ ನೀಡಿದರು. ಅಂತೆಯೇ ಇವರ ಕಾಲದಲ್ಲಿ ದೇಶದಲ್ಲಿ ನಾಲ್ಕು ರೀತಿಯಲ್ಲಿ ಕೈಗಾರಿಕೆಗಳನ್ನು ಸ್ಥಾಪನೆ ಮಾಡಲು ಅನುಕೂಲವಾಯಿತು. ಅವು ಈ ಕೆಳಗಿನಂತಿವೆ.

"೧. ಖಾಸಗಿ ಕ್ಷೇತ್ರದಲ್ಲಿ ಸ್ಥಾಪನೆಯಾಗುವ ಕೈಗಾರಿಕೆಗಳು

೨. ಸರ್ಕಾರದ ವತಿಯಿಂದ ನೇರವಾಗಿ ಬೆಳೆಯಬೇಕಾದ ಕೈಗಾರಿಕೆಗಳು (ಖಾಸಗಿ ಬಂಡವಾಳಗಾರರು ಇರುವುದಿಲ್ಲ.)

೩. ಸಹಕಾರ ಕ್ಷೇತ್ರ ಅಂದರೆ ಸಹಕಾರ ಸಂಘಗಳ ಮುಖೇನ ಬೆಳೆಯುವಂಥ ಕೈಗಾರಿಕೆಗಳು

೪. ಸಂಯುಕ್ತಕ್ಷೇತ್ರ ಅಂದರೆ ಸರ್ಕಾರದವರು ಮತ್ತು ಖಾಸಗಿ ಬಂಡವಾಳಗಾರರು ಉಭಯೆತ್ರರರು ಸೇರಿ ಸ್ಥಾಪನೆ ಮಾಡಬಹುದಾದ ಕೈಗಾರಿಕೆಗಳು"[೮]

ಇದು ಕೇವಲ ಕರ್ನಾಟಕ ರಾಜ್ಯದಲ್ಲಿ ಅಲ್ಲದೆ ರಾಷ್ಟ್ರಮಟ್ಟದಲ್ಲಿ ಈ ರೀತಿಯ ಸ್ಥಾಪನೆ ಮಾಡಲು ಸಾಕಷ್ಟು ಶ್ರಮಿಸಿದವರು. ಕೇವಲ ವ್ಯವಸಾಯದಿಂದಲೇ ನಮ್ಮ ದೇಶ ಅಭಿವೃದ್ಧಿಯಾಗದು. ಆದ್ದರಿಂದ ವ್ಯವಸಾಯದ ಜೊತೆಗೆ, ಕೈಗಾರಿಕೆಗಳು ಬೆಳೆಯಬೇಕು ಅಂದಾಗ ಮಾತ್ರ ದೇಶದ ಸಂಪತ್ತು ಹೆಚ್ಚಾಗುತ್ತದೆ. ಇದರಿಂದ ಬಡತನ ಮತ್ತು ನಿರುದ್ಯೋಗವನ್ನು ಬೇರುಸಮೇತ ಕಿತ್ತುಹಾಕಲು ಸಾಧ್ಯವಾಗುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. "ರಾಷ್ಟ್ರೀಯ ಯೋಜನೆ ಮತ್ತು ಪ್ರಾದೇಶಿಕ ಯೋಜನೆ, ಗ್ರಾಮಾಂತರ ಯೋಜನೆ ಹಾಗೂ ಪ್ರಾದೇಶಿಕ ಯೋಜನೆ, ಗ್ರಾಮಾಂತರ ಯೋಜನೆ ಹಾಗೂ ಸಾರ್ವಜನಿಕ ಸಹಭಾಗಿತ್ವ, ಆಧುನಿಕರಣ, ಪ್ರಾದೇಶಿ ಅಸಮತೋಲನಗಳು ಗ್ರಾಮೀಣ ಅಭಿವೃದ್ಧಿಯ ಬಗ್ಗೆ ಚರ್ಚಿಸುವುದು, ಅಭಿವೃದ್ಧಿ ಬಗ್ಗೆ ಆಲೋಚಿಸುವುದು ಪರಿಸರದ ಪುನರ್ರಚನೆ ಮತ್ತು ಪ್ರಾದೇಶಿಕ ಯೋಜನೆಗಳಲ್ಲಿ ಕೆಲಸ ಮಾಡಿದವರಿಗೆ ತರಬೇತಿ ನೀಡುವುದು ಇವುಗಳಲ್ಲಿ ಕರ್ನಾಟಕದ ಪ್ರಗತಿಗೆ ವಿಶೇಷ ಮಹತ್ವದ ವಿಷಯಗಳಾಗಿವೆ."[೯]

ಅರಸರು ತಮ್ಮ ಆಳ್ವಿಕೆಯ ಅವಧಿಯಲ್ಲಿಯೇ ಭದ್ರಾವತಿ ಉಕ್ಕಿನ ಕಾರ್ಖಾನೆ ಮತ್ತು ಕಬ್ಬಿಣ ಕಾರ್ಖಾನೆಯನ್ನು ವಿಸ್ತರಿಸಿ ಅದನ್ನು ಲಾಭ ನೀಡುವ ಉದ್ದಿಮೆಯಾಗಿ ಮಾಡಲಾಯಿತು. ಮುಂದೆ ಮಂಡ್ಯ ಜಿಲ್ಲೆಯಲ್ಲಿ ಸ್ಕೂಟರ್ ಮತ್ತು ಸಕ್ಕರೆ ಕಾರ್ಖಾನೆಗಳು ಆರಂಭವಾದದ್ದು ಇವರ ಕಾಲದಲ್ಲಿಯೇ. ಮತ್ತು ಇರಾನಿನ ಸಹಾಯದಿಂದ ಕುದುರೆಮುಖದಲ್ಲಿ ಕಬ್ಬಿಣದ ಅದಿರು ಎತ್ತುವ ಬೃಹತ್ ಉದ್ಯಮಕ್ಕೆ ನಾಂದಿಯಾಡಿದರು. ಮುಂದೆ ಐದನೆ ಯೋಜನೆಯನ್ನು ಜಾರಿಗೆ ತರುವುದರ ಮೂಲಕ "ಅಧಿಕ ಉತ್ಪಾದನೆ, ಸ್ವಾವಲಂಬನೆ" ಇವುಗಳ ಜೊತೆಗೆ ಉದ್ಯೋಗಾವಕಾಶಗಳನ್ನು ಒದಗಿಸುವುದಾಗಿತ್ತು. ನಮ್ಮ ಬೃಹತ್ ರಾಷ್ಟ್ರದಲ್ಲಿ ಉದ್ಯೋಗ ಒದಗಿಸಬೇಕಾದರೆ ಔದ್ಯೋಗಿಕ ಕ್ಷೇತ್ರದಲ್ಲಿ ಪ್ರಗತಿ ಸಾಧಿಸಬೇಕು.

ಜೊತೆಗೆ ನೂಲು ಗಿರಣಿ ಮತ್ತು ಕೈಮಗ್ಗಗಳ ಸಂಖ್ಯೆ ಹೆಚ್ಚಾಗಬೇಕು ಇದರಿಂದಾಗಿ ರಾಜ್ಯ ಮತ್ತು ರಾಷ್ಟ್ರವು ಆರ್ಥಿಕ ಮಟ್ಟದಲ್ಲಿ ಪ್ರಗತಿ ಹೊಂದಲುಸಾಧ್ಯ ಎಂದು ಹೇಳುತ್ತಿದ್ದರು. ಅಲ್ಲದೇ ನಗರ ಮತ್ತು ಮಹಾನಗರಗಳ ಪಾಲಿಕೆಗಳ ಆಕ್ಟ್ರಾಯ್ ಸುಂಕವನ್ನು ರದ್ದುಪಡಿಸಿ ಅವುಗಳಿಗೆ ಪರಿಹಾರವನ್ನು ಕಲ್ಪಿಸಿದರು.

### ೫.೭. ಬಡತನ ನಿರ್ಮೂಲನ ಯೋಜನೆಗಳು

ಡಿ. ದೇವರಾಜ ಅರಸರು ಬಡನತ ನಿರ್ಮೂಲನೆಯ ಯೋಜನೆಗಳಿಗೆ ವಿಶೇಷ ಆದ್ಯತೆಯನ್ನು ಕೊಟ್ಟರು. ಬಡನತ ತೊಲಗದೆ ದೇಶದ ನಮ್ಮ ಆರ್ಥಿಕ ವ್ಯವಸ್ಥೆ ಸುಧಾರಿಸದು ಎಂಬುದನ್ನು ಮನಗಂಡಿದ್ದ ಇವರು ಇಂದಿರಾಗಾಂಧಿ ಪ್ರಧಾನಿಯಾಗಿದ್ದಾಗ ಅವರ ಗಮನಕ್ಕೆ ತಂದು ಈ ವಿಷಯವನ್ನು ಗಂಭೀರವಾಗಿ ಪರಿಗಣಿಸುವಂತೆ ಸೂಕ್ತ ವಾತಾವರಣ ನಿರ್ಮಾಣ ಮಾಡಿದ್ದರು.

ಈ ಬಡತನ ನಿರ್ಮೂಲನ ಯೋಜನೆಯು ಹಲವಾರು ಕಾರ್ಯಕ್ರಮಗಳನ್ನು ಹೊಂದಿದ್ದು, ಅವುಗಳಲ್ಲಿ ಗೃಹ ನಿರ್ಮಾಣ ಯೋಜನೆ, ಸಾಲಪರಿಹಾರ ಶಾಸನ, ಗ್ರಾಮೀಣರಿಗೆ ಉದ್ಯೋಗ ಭರವಸೆಯ ಕಾರ್ಯಕ್ರಮ ಮತ್ತು ಇಪ್ಪತ್ತು ಅಂಶಗಳ ಕಾರ್ಯಕ್ರಮಗಳ ಅನುಷ್ಠಾನ ಮುಂತಾದವು ೧೯೭೩ರ ನವೆಂಬರ್‌ನಲ್ಲಿ ನಡೆದ ದಕ್ಷಿಣ ಭಾರತದ ಹಿಂದುಳಿದ ವರ್ಗ ಮತ್ತು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಅಲ್ಪಸಂಖ್ಯಾತರ ಸಮಾವೇಶದಲ್ಲಿಯೇ ಪ್ರಧಾನಿ ಇಂದಿರಾಗಾಂಧಿಯವರು "ಗರೀಬಿ ಹಠಾವೋ" ಘೋಷಣೆ ಮಾಡಿದರು. ದೇವರಾಜ ಅರಸು ಅವರು ನಿಜಲಿಂಗಪ್ಪನವರ ಸಂಪುಟದಲ್ಲಿದ್ದಾಗ ಯೋಚಿಸಿದ ಹಲವಾರು ವಿಚಾರಗಳನ್ನು ತಮ್ಮ ಆಳ್ವಿಕೆಯ ಅವಧಿಯಲ್ಲಿ ಈ ಮೇಲಿನ ಯೋಜನೆಗಳನ್ನು ಅನುಷ್ಠಾನಗೊಳಿಸಿದರು. ಅವರ ಆಗಿನ ಅನುಭವ ಈಗ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಪ್ರಕಟವಾಯಿತು.

### ೧. ಗೃಹನಿರ್ಮಾಣ ಯೋಜನೆ

ಅರಸು ನಿಜಲಿಂಗಪ್ಪನವರ ಸಂಪುಟದಲ್ಲಿದ್ದಾಗಲೇ ವಸತಿ ಮಂತ್ರಿಯಾಗಿ ಪಡೆದ ಅನುಭವ ಈಗ ದೀನದುರ್ಬಲ ವರ್ಗದ ಜನರಿಗೆ ವಸತಿ ಕಲ್ಪಿಸಲು ಸಹಾಯಕ್ಕೆ ಬಂದಿತು. ಕಡುಬಡತನದಲ್ಲಿ ಬೆಂದು ಬಡತನವೇ ನಮ್ಮ ಬದುಕು ಎಂದು ಜೀವನ ನಡೆಸಿದ ಜನತೆಗೆ ಈ ಗೃಹನಿರ್ಮಾಣದ ಯೋಜನೆಯಿಂದ ಸ್ವಲ್ಪ ಉಸಿರಾಡುವಂತಾಯಿತು. ಮನೆಯಿಲ್ಲದವರಿಗೆ ಮನೆ ನಿರ್ಮಿಸಿ ಜನರಿಗೆ ಹಂಚುವ ಕಾರ್ಯಕ್ರಮ ಹಮ್ಮಿಕೊಂಡರು. ಜನತಾಮನೆಗಳನ್ನು ಹಾಗೂ ಮನೆಕಟ್ಟಿಕೊಳ್ಳಲು ಮುಂದೆ ಬರುವ ಜನರಿಗೆ ನಿವೇಶನಗಳನ್ನು ವಿತರಿಸಿದರು. ಸುಮಾರು ಏಳು ಲಕ್ಷ ನಿವೇಶನಗಳನ್ನು ಆ ಸಂದರ್ಭ ದಲ್ಲಿ ಹಂಚಲಾಯಿತು. ಮತ್ತು ೮೦,೦೦೦ ಸಾವಿರ ಜನತಾ ಮನೆಗಳನ್ನು ಗ್ರಾಮೀಣ ಪ್ರದೇಶದಲ್ಲಿಯೂ ಮತ್ತು ೧೩,೦೦೦ ಸಾವಿರ ಮನೆಗಳನ್ನು ನಗರ ಪ್ರದೇಶದಲ್ಲಿಯೂ ನಿರ್ಮಿಸಿ ಹಂಚಲಾಯಿತು. ಈ ಯೋಜನೆಯಿಂದ ಅನೇಕ ನಿರ್ಗತಿಕ ಕುಟುಂಬಗಳಿಗೆ ಆಶ್ರಯ ದೊರಕಿದಂತಾಯಿತು.

## ೨. ಸಹಕಾರಿ ಸಂಘಗಳ ಪುನರ್ ಸಂಘಟನೆ

ಸಮಾಜದ ತೀರ ಬಡವರಿಗೂ ಅನುಕೂಲವಾಗುವಂತೆ ಅವರನ್ನು ಒಳಗೊಂಡಂತೆ ಸಹಕಾರಿ ಕಾಯ್ದೆಗೆ ತಿದ್ದುಪಡಿ ತಂದು ಸಹಕಾರಿ ಸಂಘಗಳನ್ನು ಪುನರ್ ಸಂಘಟಿಸಲಾಯಿತು. ಕೇವಲ ಪ್ರಭಾವಿ ಜನರ ಕೈಯಲ್ಲಿ ಸಿಕ್ಕಿದ ಸಹಕಾರಿ ಸಂಘಗಳಲ್ಲಿ ಜನಸಾಮಾನ್ಯರು ಪ್ರಜಾಪ್ರಭುತ್ವ ತತ್ವಗಳ ಆಧಾರದ ಮೇಲೆ ಸರ್ವರಿಗೂ ಸಮಾನವಾಗಿ ಅಭಿವೃದ್ಧಿ ಹೊಂದಲು ಅವಕಾಶ ಮಾಡಿಕೊಟ್ಟರು.

## ೩. ಉದ್ಯೋಗ ಭರವಸೆ ಕಾರ್ಯಕ್ರಮ

ಬಡಜನತೆಗೆ ಹಲವಾರು ಉದ್ಯೋಗವನ್ನು ಒದಗಿಸಿ ಕೊಡಲು ಈ ಮೇಲಿನ ಕಾರ್ಯ ಯೋಜನೆಯನ್ನು ಜಾರಿಗೆ ತಂದರು. ಈ ಉದ್ಯೋಗ ಭರವಸೆಯ ಕಾರ್ಯಕ್ರಮದ ಪ್ರಕಾರ ಭೂಹೀನ ಕಾರ್ಮಿಕರು ಮತ್ತು ಕೂಲಿಕಾರರಿಗೆ ಕೃಷಿಯಲ್ಲಿ ೧೦೦ ದಿನಗಳವರೆಗೆ ಉದ್ಯೋಗ ಭರವಸೆಯನ್ನು ನೀಡಲಾಯಿತು. ಕೃಷಿಯ ಕೆಲಸಗಳನ್ನೇ ನಂಬಿಕೊಂಡಿದ್ದ ಜನರಿಗೆ ಇದರಿಂದ ವರ್ಷವಿಡೀ ನಿಶ್ಚಿಂತೆಯಿಂದ ಬದುಕುವ ಮಾರ್ಗ ಸೃಷ್ಟಿಯಾಯಿತು. ಪರಿಣಾಮಕಾರಿಯಾದ ಅಂಶವೆಂದರೆ "ಗ್ರಾಮೀಣ ಪ್ರದೇಶದಲ್ಲಿ ಇದ್ದಾಗ ಕೂಲಿ, ಇಲ್ಲದಿದ್ದಾಗ ಉಪವಾಸ ಸ್ಥಿತಿಯಲ್ಲಿದ್ದ ಜನರು ಮತ್ತು ಭೂಮಾಲೀಕರ ನಡುವಿನ ಸಮಸ್ಯೆಗಳು ಇದರಿಂದ ನಿವಾರಣೆಯಾದದ್ದು."[೧೦]

## ೪. ಇಪ್ಪತ್ತು ಅಂಶಗಳ ಕಾರ್ಯಕ್ರಮಗಳ ಅನುಷ್ಠಾನ

ಭಾರತದ ಗ್ರಾಮೀಣ ಅಭಿವೃದ್ಧಿಯಲ್ಲಿ ೨೦ ಅಂಶಗಳ ಕಾರ್ಯಕ್ರಮವು ಬಹಳ ಮುಖ್ಯವಾದದ್ದು. ಈ ಕಾರ್ಯಕ್ರಮ ೧೯೭೫ ಜುಲೈ ೧ ರಂದು ಜಾರಿಗೆ ಬಂದಿತು. ಈ ಕಾರ್ಯಕ್ರಮಗಳು ಈ ಕೆಳಗಿನಂತಿವೆ.

೧. ಅವಶ್ಯಕ ವಸ್ತುಗಳ ಬೆಲೆಯನ್ನು ಇಳಿಸುವುದು ಮತ್ತು ಸರ್ಕಾರಿ ವೆಚ್ಚದಲ್ಲಿ ಮಿತವ್ಯಯ ಸಾಧಿಸುವುದು.

೨. ಭೂ ಸುಧಾರಣೆಯನ್ನು ಜಾರಿಗೆ ತರುವುದು ಮತ್ತು ಹೆಚ್ಚುವರಿ ಭೂಮಿಯನ್ನು ಭೂರಹಿತರಿಗೆ ಹಂಚುವುದು.

೩. ಭೂರಹಿತ ಮತ್ತು ದುರ್ಬಲ ವರ್ಗದವರಿಗೆ ವಸತಿ ನಿವೇಶನಗಳನ್ನು ಒದಗಿಸುವುದು.

೪. ಜೀತಪದ್ಧತಿಯನ್ನು ನಿರ್ಮೂಲನೆಗೊಳಿಸುವುದು.

೫. ಗ್ರಾಮೀಣ ಋಣಬಾಧೆಯನ್ನು ಕೊನೆಗಾಣಿಸುವುದು ಮತ್ತು ಭೂರಹಿತ ಕಾರ್ಮಿಕರಿಗೆ ಸಣ್ಣ ರೈತರ ಹಾಗೂ ಕುಶಲಕರ್ಮಿಗಳ ಸಾಲದ ಪಾವತಿಯನ್ನು ಮುಂದೂಡುವುದು.

೬. ಕೃಷಿ ಕ್ಷೇತ್ರದ ಕನಿಷ್ಠಕೂಲಿ ಕಾಯ್ದೆಯನ್ನು ಜಾರಿಗೊಳಿಸುವುದು.

೭. ಐದು ಲಕ್ಷ ಹೆಕ್ಟರ್‌ಗಳಿಗೆ ನೀರಾವರಿ ಸೌಲಭ್ಯ ಒದಗಿಸುವುದು.

೮. ವಿದ್ಯುತ್ ಉತ್ಪಾದನೆಯನ್ನು ಹೆಚ್ಚಿಸುವುದು.

೯. ಕೈಮಗ್ಗದ ಅಭಿವೃದ್ಧಿಗೆ ಹೊಸ ಯೋಜನೆಯನ್ನು ರೂಪಿಸುವುದು.

೧೦. ಸಾಮಾನ್ಯ ಜನರ ಬಟ್ಟೆಯ ಗುಣಮಟ್ಟ ಹಾಗೂ ಸರಬರಾಜನ್ನು ಸುಧಾರಿಸುವುದು.

೧೧. ನಗರ ಪ್ರದೇಶದ ಜಮೀನನ್ನು ಸಾಮಾಜಿಕ ಒಡೆತನಕ್ಕೆ ತೆಗೆದುಕೊಳ್ಳುವುದು ಮತ್ತು ಖಾಸಗಿ ಭೂಒಡೆತನದ ಬಗ್ಗೆ ಮಾಹಿತಿ ಹೊಂದುವುದು.

೧೨. ತೆರಿಗೆ ತಪ್ಪಿಸುವುದನ್ನು ನಿಯಂತ್ರಿಸುವುದು ಮತ್ತು ತೆರಿಗೆಗಳನ್ನು ದಂಡಿಸುವುದು.

೧೩. ಕಳ್ಳ ಸಾಗಾಣಿಕೆದಾರರ ಆಸ್ತಿಯನ್ನು ಮುಟ್ಟುಗೋಲು ಹಾಕುವುದು.

೧೪. ಬಂಡವಾಳ ಹೂಡಿಕೆಯನ್ನು ಸರಳಗೊಳಿಸುವುದು. ಆಮದು ಪರವಾನಿಗಿ ದುರುಪಯೋಗಕ್ಕೆ ಶಿಕ್ಷೆ ವಿಧಿಸುವುದು.

೧೫. ಕಾರ್ಮಿಕರ ಕಲ್ಯಾಣಕ್ಕೆ ಹೊಸ ಯೋಜನೆ.

೧೬. ರಸ್ತೆ ಸಾರಿಗೆಯಲ್ಲೂ ರಾಷ್ಟ್ರೀಯ ಮಟ್ಟದ ಪರವಾನಿಗೆ ನೀಡಿಕೆ.

೧೭. ವರಮಾನ ತೆರಿಗೆಯನ್ನು ಏರಿಸುವುದು.

೧೮. ವಿದ್ಯಾರ್ಥಿಗಳ ನಿಲಯಗಳಿಗೆ ನಿಯಂತ್ರಿತ ಬೆಲೆಯಲ್ಲಿ ಅವಶ್ಯಕ ವಸ್ತುಗಳ ಪೂರೈಕೆ.

೧೯. ನಿಯಂತ್ರಿತ ಬೆಲೆಯಲ್ಲಿ ವಿದ್ಯಾರ್ಥಿಗಳಿಗೆ ಪುಸ್ತಕಗಳು ಮತ್ತು ಲೇಖನ ತರಬೇತಿ ಯೋಜನೆ.

೨೦. ದುರ್ಬಲ ವರ್ಗದ ಜನರಿಗೆ ಉದ್ಯೋಗಾವಾಕಾಶಗಳನ್ನು ಹೆಚ್ಚಿಸಲು ವಿಶೇಷ ತರಬೇತಿ ಯೋಜನೆ.

ಇಂಥ ಇಪ್ಪತ್ತು ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಿದ ರಾಜ್ಯವೆಂದರೆ ಕರ್ನಾಟಕ. ಅದಕ್ಕೆ ಕಾರಣವೆಂದರೆ ಅರಸು. ಅವರು ಇಂದಿರಾಗಾಂಧಿಯವರ ಕಟ್ಟಾ ಬೆಂಬಲಿಗರಾಗಿದ್ದರು. ಈ ಹಿಂದೆ ಯಾವ ಸರ್ಕಾರವು ಇಪ್ಪತ್ತು ಅಂಶಗಳ ಕಾರ್ಯಕ್ರಮಗಳನ್ನು ಜಾರಿಗೆ ತರುವ ಕುರಿತು ಯೋಚಿಸಿರಲಿಲ್ಲ. ಆದರೆ ಅರಸುರವರು ಈ ಕೀರ್ತಿಗೆ ಪಾತ್ರರಾದದ್ದು ಒಂದು ವಿಶೇಷ. ಈ ಮೊದಲೇ ಹೇಳಿದಂತೆ ಇಂದಿರಾಗಾಂಧಿಯವರಿಂದ "ಗರೀಬಿ ಹಟಾವೋ" ಘೋಷಣೆಯಾದದ್ದೇ ಕರ್ನಾಟಕದಲ್ಲಿ. ಆದ್ದರಿಂದ ಈ ಬಡತನ ನಿರ್ಮೂಲನಕ್ಕೆ ಕಾರಣವಾಗಬಲ್ಲ ಇಪ್ಪತ್ತು ಅಂಶಗಳ ಕಾರ್ಯಕ್ರಮದ ಅನುಷ್ಠಾನ ಕರ್ನಾಟಕದಲ್ಲಿ ಪರಿಣಾಮಕಾರಿಯಾಗಿ ನಡೆಯಿತು. ಅರಸು ಮುಖ್ಯಮಂತ್ರಿಯಾಗಿದ್ದರಿಂದ ಈ ಯೋಜನೆಗೆ ಅತ್ಯಂತ ಹೆಚ್ಚಿನ ಆದ್ಯತೆ ನೀಡಲಾಯಿತು. ಮತ್ತು ಈ ಯೋಜನೆ ಆ ಕಾರಣದಿಂದಲೇ ಪ್ರಾಮುಖ್ಯತೆಯನ್ನು ಪಡೆಯಿತು.

ಒಟ್ಟಿನಲ್ಲಿ "ಕೇಂದ್ರಸರ್ಕಾರದ ಈ ಯೋಜನೆಯ ಮೂಲ ಕರ್ನಾಟಕ"[೧೧] ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

### ೫. ಉಚಿತ ವಿದ್ಯುತ್ ಯೋಜನೆ

ಅರಸು ತಮ್ಮ ಆಡಳಿತದ ಅವಧಿಯಲ್ಲಿ ಪ್ರತಿಯೊಬ್ಬ ಬಡವನಿಗೆ ನಿವೇಶನ ಒದಗಿಸಿದಂತೆ 'ಭಾಗ್ಯಜ್ಯೋತಿ' ಯೋಜನೆ ಅಡಿಯಲ್ಲಿ ಹಣತೆ ಬುಡ್ಡಿದೀಪಗಳು ಬಳಸಲು ಆರ್ಥಿಕ ಸಾಮರ್ಥ್ಯವಿಲ್ಲದ

ಜನರಿಗೆ ಪ್ರತಿಯೊಂದು ಮನೆಗೆ ಉಚಿತ ವಿದ್ಯುತ್ ದೀಪವನ್ನು ಒದಗಿಸಿದರು. ಹೊತ್ತು ಮುಳುಗಿದ ಕೂಡಲೇ ಉಂಡು ಮಲಗುವ ಬಡವನಿಗೆ ತನ್ನ ಅಳುವಿನಲ್ಲಿಯೇ ಬರುವ ವೈಚಾರಿಕ ವಿನಿಮಯಕ್ಕೆ ಚಿಂತನೆಗೆ ಅವಕಾಶವೆಲ್ಲಿ ಬಡವರ, ಆರ್ಥಿಕವಾಗಿ ದುಃಸ್ಥಿತಿಯಲ್ಲಿ ಇದ್ದವರ ನಡುವೆಯೇ ಮೂಡಿಬಂದ ಅರಸು, ಅಂಥವರೂ ತಮ್ಮ ಮೈಮನಗಳು ಬೆಳಕು ಕಾಣಬೇಕೆಂದು ಆಶಯ ಅವರದು. ಅಂಥವರ ಪ್ರತಿಯೊಂದು ಮನೆಗೂ ಸರ್ಕಾರ ಒಂದೊಂದು ದೀಪ ಹಾಕಿಸಿ, ಬೆಳಕು ಕಾಣಿಸುವ ಅಪೂರ್ವ ಯೋಜನೆ ಈ "ಭಾಗ್ಯಜ್ಯೋತಿ" ಯೋಜನೆ. ಇದನ್ನು ಜಾರಿಗೆ ತರಲು ಪರೋಕ್ಷವಾಗಿ ಪ್ರಭಾವ ಬೀರಿದವರೆಂದರೆ ಎನ್.ಡಿ. ವೆಂಕಟೇಶ ಎಂದು ಸಿ.ಆರ್. ಗೋವಿಂದರಾಜು ಅವರು 'ಕರ್ನಾಟಕದ ಅರಸು' ಎಂಬ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ.[೧೨] ಒಂದು ವೇಳೆ ಅರಸು ಅವರು ಈ ಯೋಜನೆ ಅನುಷ್ಠಾನಗೊಳಿಸದೇ ಹೋಗಿದ್ದರೆ ಈ ಬಡಜನತೆ ಇನ್ನೆಷ್ಟು ದಿನಗಳ ಕಾಲ ತಮ್ಮ ಬದುಕನ್ನು ಕತ್ತಲಲ್ಲಿ ಕಳೆಯಬೇಕಾಗುತ್ತಿತ್ತೋ ಎನ್ನುವ ಭಾವನೆ ಜನನಾಯಕರಲ್ಲಿ ಹುಟ್ಟುತ್ತದೆ.

೧೯೭೦ರ ದಶಕದಲ್ಲಿ ಅರಸು ಕೈಗೊಂಡ ಈ ಮೇಲ್ಕಂಡ ಆರ್ಥಿಕ ಅಭಿವೃದ್ಧಿ ಯೋಜನೆಗಳು ಸಾಮಾಜಿಕನ್ಯಾಯ ಪ್ರೇರಿತವಾದವು ಎಂದು ಹೇಳಬಹುದು. ಈ ಅರ್ಥದಲ್ಲಿ ದೇವರಾಜ ಅರಸು ಅವರು 'ಸಾಮಾಜಿಕನ್ಯಾಯದ ಹರಿಕಾರರು' ಬಡಜನತೆಗಾಗಿ ಮತ್ತು ಈ ನಾಡಿನ ಅಭಿವೃದ್ಧಿಗಾಗಿ ಅರಸು ಅಂತಃಕರಣ ಮಿಡಿದ ಅಪರೂಪದ ಹೃದಯವಂತಿಕೆಯುಳ್ಳ ರಾಜಕೀಯ ನೇತಾರರು. "ಅಂದು ಅರಸರನ್ನು ಮಾಧ್ಯಮಗಳು ಮತ್ತು ಅವರ ರಾಜಕೀಯ ವಿರೋಧಿಗಳು ಅವರೊಬ್ಬ ಅಗ್ಗದ ಪ್ರಚಾರಕ್ಕೆ ಹಂಬಲಿಸುವ ಓಟುಬ್ಯಾಂಕಿನ ರಾಜಕಾರಣದವರೆಂದು ಹಂಗಿಸಿದ್ದೂ ಉಂಟು."[೧೩] ಬಡವರಿಗಾಗಿ ಸರ್ಕಾರದಿಂದ ನೀಡಲಾಗಿರುವ ಆರ್ಥಿಕ ನೆರವು ಈ ದೇಶದಲ್ಲಿ ಕೆಲವರಿಗೆ ಜನಪ್ರಿಯ ಅಗ್ಗದ ಹಾಗೂ ಸರ್ಕಾರಕ್ಕೆ ಹೊರೆಯಾದ ಕಾರ್ಯಕ್ರಮಗಳಾಗಿ ತೋರುವುದು ಅವರ ಅವಜ್ಞಾನವನ್ನು ಮತ್ತು ಹೃದಯ ಹೀನತೆಯನ್ನು ತೋರುತ್ತದೆ.

ದೇವರಾಜ ಅರಸರು ಜಾರಿಗೆ ತಂದ ಯೋಜನೆಗಳು ನ್ಯಾಯ ಪ್ರೇರಿತ ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳು ಇಂದಿನ ಜಾಗತೀಕರಣದಲ್ಲಿ ಸಾಮಾಜಿಕ ಭದ್ರತೆ ಕಾರ್ಯಕ್ರಮಗಳೆಂಬ ಹಣೆಪಟ್ಟಿ ಹೊತ್ತು ಮರಳಿ ಬಂದಿವೆ. ಈ ಕಾರ್ಯ ಯೋಜನೆಗಳಿಗೆ ವಿಶ್ವಬ್ಯಾಂಕು ಅಂತರಾಷ್ಟ್ರೀಯ ಹಣಕಾಸು ನಿಧಿ, ಅಂತರಾಷ್ಟ್ರೀಯ ಕಾರ್ಮಿಕ ಸಂಘ ಮೊದಲಾದವುಗಳ ಮಾನ್ಯತೆ, ಬೆಂಬಲ ದೊರಕುತ್ತಿದೆ. ಅವುಗಳನ್ನು ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣದ ಪರವಾಗಿ ಮುಂಚೂಣಿ ಅರ್ಥಶಾಸ್ತ್ರಜ್ಞರಾದ ಅಮರ್ತ್ಯಸೇನ್, ಟಿ.ಎನ್. ಶ್ರೀನಿವಾಸನ್, ಎ.ಆರ್. ಬ್ರಹ್ಮಾನಂದ, ಡಿ.ಎಂ. ನಂಜುಂಡಪ್ಪ, ಎ.ಎಂ. ಖುಸ್ರೋ, ಬಿ.ನಾ. ಅಗರವಾಲ್, ಒಡೆಯರ್ ಹೆಗ್ಗಡೆ, ಜಿ. ತಿಮ್ಮಯ್ಯ ಹಲವಾರು ಆರ್ಥಿಕ ಚಿಂತಕರು ಅರಸು ಅನುಷ್ಠಾನಗೊಳಿಸಿದ ಅಭಿವೃದ್ಧಿ ಯೋಜನೆಗಳಿಗೆ ಬೆಂಬಲ ಸೂಚಿಸಿದ್ದಾರೆ. ಒಟ್ಟಿನಲ್ಲಿ ಅವರು, ಅಪೂರ್ಣಾಭಿವೃದ್ಧಿಯ ಶಾಪದಿಂದ ದುರ್ಬಲರನ್ನು ಮುಕ್ತಗೊಳಿಸಲು ಸಾಮಾಜಿಕನ್ಯಾಯದ ಕಾರ್ಯಕ್ರಮಗಳನ್ನು ಪ್ರತಿಪಾದಿಸಿದರೆ, ಇಂದಿನ ಜಾಗತೀಕರಣದ

ಪ್ರತಿಪಾದಕ ಅರ್ಥಶಾಸ್ತ್ರಜ್ಞರು ಸಾಮಾಜಿಕ ನ್ಯಾಯ ಕಾರ್ಯಕ್ರಮಗಳನ್ನು ಜಾಗತೀಕರಣದ ಕೆಟ್ಟ ಸಾಮಾಜಿಕ ಪರಿಣಾಮಗಳನ್ನು ನಿವಾರಕ ಸಾಧನಗಳಾಗಿ ಪ್ರತಿಪಾದಿಸುತ್ತಿದ್ದಾರೆ. ಇಷ್ಟೇ ವ್ಯತ್ಯಾಸ. ಒಟ್ಟಿನಲ್ಲಿ ಅರಸು ಅವರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಹಲವಾರು ಆರ್ಥಿಕ ಯೋಜನೆಗಳನ್ನು ಕೈಗೊಂಡು ಕರ್ನಾಟಕವನ್ನು ಆರ್ಥಿಕವಾಗಿ ಅಭಿವೃದ್ಧಿಪಡಿಸಿದರು. ಅಂತೆಯೇ ಕರ್ನಾಟಕ ರಾಜ್ಯವು ಭಾರತದ ಕೆಲವೇ ಮುಂದುವರಿದ ರಾಜ್ಯಗಳಲ್ಲಿ ಆರ್ಥಿಕವಾಗಿ ಐದನೇ ಸ್ಥಾನಕ್ಕೇರಿತು.[೧೪] ಈ ಹಿಂದೆ ಹನ್ನೊಂದನೆ ಸ್ಥಾನದಲ್ಲಿತ್ತು. ಇದನ್ನು ಸರಿದೂಗಿಸುವಲ್ಲಿ ಅರಸು ವಹಿಸಿದ ಪಾತ್ರ ಕರ್ನಾಟಕದ ಜನತೆ ಯಾರೂ ಮರೆಯಲು ಸಾಧ್ಯವಿಲ್ಲ.

**ಟಿಪ್ಪಣಿಗಳು**

೧. ಮಧುಕೇಶ., (೨೦೦೨), **ಅರಸು ಜೀವನ ಚರಿತ್ರೆ**, ಪು.೮೭

೨. ನಾಯ್ಕರ್ ಡಿ.ಕೆ., (೨೦೦೦), **ದೇವರಾಜ ಅರಸರು**, ಪು.೫೭

೩. ಯಲ್ಲಪ್ಪರೆಡ್ಡಿ ಆ.ನ., (೨೦೦೧), **ಅರಸು ಯುಗದ ಅರಣ್ಯಪರ್ವ**, ಪು.೪೬

೪. ಅದೇ, ಪು.೫೮

೫. ಅದೇ, ಪು.೪೬

೬. ಮಧುಕೇಶ., (೨೦೦೨), **ಧೀಮಂತನಾಯಕ**, ಪು.೪೭

೭. ನಾಯಕ ಹಾ.ಮಾ., (೧೯೭೬), **ಪ್ರಗತಿಪಥ**, ಪು.೧೬೬

೮. ಅದೇ, (೧೯೭೬), ಪು.೮೬

೯. ಅದೇ, (೧೯೭೬), ಪು.೫೫

೧೦. ಅರಸು ಸಂಶೋಧನಾ ಸಂಸ್ಥೆ., (೧೯೯೭), **ಸಾಧನೆಗಳ ಸರದಾರ**, ಪು.೮೩

೧೧. ಅದೇ, ಪು.೮೪

೧೨. ವೆಂಕಟೇಶ ಎಚ್.ಎ., (ಸಂ.), (೨೦೦೦), **ಕರ್ನಾಟಕದ ಅರಸು**, ಪು.೧೨೮

೧೩. ಅರಳುಮಲ್ಲಿಗೆ ಪಾರ್ಥಸಾರಥಿ., (೨೦೦೧), **ಕರ್ನಾಟಕದ ಮುಖ್ಯಮಂತ್ರಿಗಳು**, ಪು.೧೨೦

೧೪. ವೆಂಕಪ್ಪಗೌಡ ಕೋಣಂದೂರು., (೧೯೮೪), **ಪರಿವರ್ತನೆಯ ಹರಿಕಾರ**, ಪು.೨೧೧

'ಕರ್ನಾಟಕ' ಈ ಹೆಸರೇ ಚೇತನದ ಶಕ್ತಿ. ಹನುಮಶಕ್ತಿಯ ತವರು ಈ ನಾಡು. ಸಾಹಸಿಗಳು ಇತಿಹಾಸ ಪ್ರಸಿದ್ಧ ಸಾಧನೆಗಳಿಂದ ರಾರಾಜಿಸಿದ ಮರೆಯಲಾಗದ ಈ ನಾಡು. ಅರಸು ಮನೆತನಗಳು ಧರ್ಮ, ಸಂಸ್ಕೃತಿ, ಸಾಹಿತ್ಯ, ಭಾಷೆ ಹಾಗೂ ಕಲೆಗಳ ತವರೂರು ಈ ಕರ್ನಾಟಕ. ಬೆಟ್ಟಗುಡ್ಡಗಳ ನೆಲಸಂಪತ್ತು, ಹಿತಕರ ಹವೆ, ನಿತ್ಯಹರಿದ್ವರ್ಣದ ಕಾಡುಗಳು, ಸಂಭ್ರಮದ ಜನ, ಸಡಗರದ ಕಡಲ ತೀರ ಪ್ರಜ್ಞಾವಂತ ಜನಾಂಗ, ಸಾಧನೆಯ ದೃಷ್ಟಿಯಿಂದ ನಾಯಕರು, ಇವೆಲ್ಲವುಗಳ ಕರ್ನಾಟಕ. ಈ ನಾಡಿಗೆ ಸಮೃದ್ಧವಾದ ಇತಿಹಾಸವಿದೆ, ಭವ್ಯವಾದ ಪರಂಪರೆಯಿದೆ. ಉಜ್ವಲವಾದ ಸಂಸ್ಕೃತಿ, ಭಾಷೆ, ಸಾಹಿತ್ಯ, ಕರ್ನಾಟಕದ ಇತಿಹಾಸದುದ್ದಕ್ಕೂ ವಿಕಾಸಶೀಲವಾಗಿಯೇ ನಡೆದು ಬಂದಿದೆ.

ಕರ್ನಾಟಕದ ನೆಲ-ಜಲ, ಜನ-ಜೀವನ ಎಲ್ಲಾ ಸಮೃದ್ಧ, ಅಪಾರ ನಿಸರ್ಗ ಸಂಪತ್ತಿನ ನಾಡು. ವೈವಿಧ್ಯಪೂರ್ಣ ಹಾಗೂ ಲಾಭದಾಯಕ ಬೆಳೆಗಳನ್ನು ನೀಡುವ ಭೂಮಿ ಅಪಾರ ಹಾಗೂ ಅಮೂಲ್ಯ ವಾದ ಖನಿಜ ಸಂಪತ್ತಿರುವ ಭೂಗರ್ಭ ಕರ್ನಾಟಕದ ಹೆಮ್ಮೆ, ಕರ್ನಾಟಕದ ನದಿಗಳು ಇಲ್ಲಿಯ ಜನ-ಜೀವನದ ಜೀವನಾಡಿಗಳು, ವಿದ್ಯುತ್ ಹಾಗೂ ನೀರಾವರಿಯ ಕೇಂದ್ರಶಕ್ತಿ. ಇಲ್ಲಿಯ ಅರಣ್ಯಗಳು ಸಂಪತ್ತು, ಸೌಂದರ್ಯಗಳ ಅದ್ಭುತತಾಣ, ವಿಶ್ವವಿಖ್ಯಾತ ಪ್ರವಾಸಿ ತಾಣಗಳು ಕನ್ನಡ ನಾಡಿನ ತುಂಬಾ ಹರಡಿಕೊಂಡಿವೆ. ಇಂತಹ ಸಮೃದ್ಧವಾದ ಕರ್ನಾಟಕದಲ್ಲಿ ಸಾಹಿತ್ಯ, ಸಂಸ್ಕೃತಿ, ಭಾಷೆ, ಕಲೆ, ಒಂದು ಚಿರಂತನ ವಾಹಿನಿಯಾಗಿ ಹರಿದು ಬಂದಿದೆ. ಅದಕ್ಕೆ ತನ್ನದೇ ಆದ ವೈವಿಧ್ಯತೆಯಿದೆ. ಕನ್ನಡಿಗರ ಜನ-ಜೀವನಕ್ಕೆ ಸಾಹಿತಿಗಳಿಗೆ, ನಾಡಿನ ಚಿಂತಕರಿಗೆ, ರಾಜಕೀಯ ವ್ಯಕ್ತಿಗಳಿಗೆ, ಕನ್ನಡ ದಿನಪತ್ರಿಕೆಗಳಿಗೆ ಅಗತ್ಯವಿರುವ ಮೌಲ್ಯಗಳನ್ನು, ವಿಚಾರಗಳನ್ನು ಕಾಲಕಾಲಕ್ಕೆ ಅದು ನೀಡುತ್ತಾ ಬಂದಿದೆ. ಹೀಗಾಗಿ ಕರ್ನಾಟಕದ ಜನಪದ ಸಂಸ್ಕೃತಿ, ಸಾಹಿತ್ಯ, ಭಾಷೆ, ನಾಡಿನ ಆಡಳಿತ ನಿರ್ವಹಣೆ ರಾಜ್ಯದ ಗತಿ-ಪ್ರಗತಿಗಳ ನಿರ್ಧಾರ ಮಾಡಿದ ನಾಯಕರುಗಳನ್ನು ಕುರಿತು ಧೀಮಂತ ಸಾಹಿತಿಗಳು ನಾಡು-ನುಡಿ, ಸಾಹಿತ್ಯ, ಸಂಸ್ಕೃತಿಯನ್ನು ಪೋಷಿಸುತ್ತಾ ಬಂದಿದ್ದಾರೆ.

ಅಂಥವರಲ್ಲಿ ದೇವರಾಜ ಅರಸು ಅವರು ಒಬ್ಬರು. ಇವರು ನಾಡಿನ ಆರ್ಥಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಸಂಸ್ಕೃತಿ, ಸಾಹಿತ್ಯ, ಭಾಷೆ ಇವುಗಳ ಅಭಿವೃದ್ಧಿಗೆ ಇವರು ವಹಿಸಿದ ಶ್ರಮ ಅಪಾರವಾದದ್ದು. ಕನ್ನಡನಾಡಿನ, ನಾಡು-ನುಡಿಯ ಭಾಷೆ, ಸಂಸ್ಕೃತಿ ವಿಚಾರದಲ್ಲಿ ಅರಸು ತಮ್ಮ ಆಳ್ವಿಕೆಯ ಅವಧಿಯಲ್ಲಿ ಐತಿಹಾಸಿಕ ಸಾಧನೆ ಮಾಡಿದ್ದಾರೆ. ೧.೧೧.೧೯೭೩ ರಂದು ಮೈಸೂರು ರಾಜ್ಯವನ್ನು 'ಕರ್ನಾಟಕ' ಎಂದು ನಾಮಕರಣ ಮಾಡಿದರು. ಇದರಿಂದ "ಹೆಸರಾಯಿತು ಕರ್ನಾಟಕ, ಉಸಿರಾಗಲಿ ಕನ್ನಡ" ಎಂಬ ಆಶಯದಂತೆ ೧.೧೧.೧೯೭೪ ರಂದು ಕನ್ನಡ ಭಾಷೆ ಆಡಳಿತ ಭಾಷೆ

ಎಂದು ಘೋಷಿಸಿದರು. ಇದರೊಂದಿಗೆ ಕರ್ನಾಟಕದಲ್ಲಿ ಸಮಗ್ರ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಶ್ರಮಿಸಿದರು.

## ೬.೧. ಭಾಷಾಚಿಂತನೆ

ಭಾರತ ಹಲವು ಭಾಷೆಗಳ ದೇಶ. ಭಾರತ ಸಂವಿಧಾನದಲ್ಲಿ ಪ್ರಾಮುಖ್ಯತೆ ಪಡೆದಿರುವ ೧೫ ಭಾಷೆಗಳಲ್ಲದೆ, ನಮ್ಮಲ್ಲಿ ಸಾವಿರಾರು ಭಾಷೆ ಮತ್ತು ಉಪಭಾಷೆಗಳಿವೆ. ಪ್ರಾಚೀನ ಭಾರತೀಯ ಸಂಸ್ಕೃತಿ ಎಲ್ಲಾ ಭಾಷಿಕ ಹಾಗೂ ಭೌಗೋಳಿಕ ಎಲ್ಲೆಗಳನ್ನು ಮೀರಿ ಹರಿದಿದೆ. ಹೀಗಾಗಿಯೇ ವೈದಿಕ ಋಷಿಗಳು, ಉಪನಿಷತ್ಕಾರರು, ಬುದ್ಧ, ಮಹಾವೀರ, ಆಚಾರ್ಯತ್ರಯರು, ಬಸವ, ನಾನಕ, ಕಬೀರ, ಚೈತನ್ಯ ಮೊದಲಾದವರನ್ನು ಆಯಾ ಪ್ರಾದೇಶಿಕ ಸಂಸ್ಕೃತಿಯ ಪ್ರತಿನಿಧಿಗಳೆಂದು ಪರಿಗಣಿಸಿದೆ. ಇಡೀ ಭಾರತೀಯ ಸಂಸ್ಕೃತಿಯ ಪ್ರತಿನಿಧಿಗಳೆಂದು ಅತೀವ ಗೌರವದಿಂದ ಕಾಣುತ್ತೇವೆ.

ಕನ್ನಡಿಗರ, ಕರ್ನಾಟಕದ ಕ್ರಿಯಾಶೀಲ ಭಾಷೆ ಕನ್ನಡ ಅದು ಜನತೆಯ ಜೀವನಾಡಿಯಾಗಿದೆ. ನುಡಿ ಬೆಳೆದರೆ ನಾಡು ಬೆಳೆದಂತೆ. ಜನಸಾಮಾನ್ಯನ ಉತ್ಕರ್ಷಕ್ಕಾಗಿ, ಆತನಿಗೆ ತಿಳಿಯುವ ಭಾಷೆಯೇ ಆಡಳಿತ ಭಾಷೆಯಾಗಬೇಕೆಂಬ ಹೆಬ್ಬಯಕೆ ಅವರಿಗಿತ್ತು. ಕನ್ನಡವನ್ನು ಕನ್ನಡತನವನ್ನು ಬೆಳೆಸಿ ಮೆರೆಸುವ ಸಂಕಲ್ಪ ಅರಸು ಅವರದಾಗಿತ್ತು. ರಾಜ್ಯದ ಎಲ್ಲಾ ಮಟ್ಟದಲ್ಲಿ ಕನ್ನಡ ಆಡಳಿತ ಭಾಷೆಯಾಗುವಂತೆ ಕನ್ನಡ ಬಳಕೆಯ ಘೋಷಣೆ ಮಾಡಿದರು. ಅಗಾಧ ಕಾರ್ಯಕ್ರಮಗಳನ್ನು ಹಮ್ಮಿ ಕೊಂಡರು. ಸಾಹಿತ್ಯ ಪರಿಷತ್ತು, ಸಾಹಿತ್ಯ ಅಕಾಡೆಮಿಗಳಿಗಂತೂ 'ಅರಸು ದಶಕ' ಚಿನ್ನದ ಕಾಲವಾಗಿತ್ತು. ಕವಿ, ಸಾಹಿತಿಗಳಿಗೆ ಮಾಸಾಶನದ ಗೌರವದ ಮನ್ನಣೆಯೂ ಜಾರಿಗೆ ಬಂದಿದ್ದು ಅರಸು ಆಳ್ವಿಕೆಯ ಅವಧಿಯಲ್ಲಿಯೇ. ಈ ಕಾಲದಲ್ಲಿ ಸಾಹಿತ್ಯ ಪರಿಷತ್ತು ಪಟ್ಟಣದಿಂದ ಹಳ್ಳಿಯವರೆಗೂ ವಿಸ್ತರಿಸಿಕೊಂಡಿತ್ತು.

"ನಾನು ಮುಖ್ಯಮಂತ್ರಿಯಾಗಿರುವವರೆಗೂ ಬೆಳಗಾವಿಯನ್ನು ಬಿಟ್ಟುಕೊಡಲಾರೆ"
ಎಂಬ ಧೀರವಾಣಿ "ಕಾಸರಗೋಡನ್ನು ಕರ್ನಾಟಕದಿಂದ ಕಳಚಲು ಬಿಡಲಾರೆ"[೨]
– ಎಂಬ ದೃಢವಾದ ನಿಲುವು ಅವರದಾಗಿತ್ತು.

ಕೃಷ್ಣಾಕಾವೇರಿ ನದಿ ಜಲದ ಬಗ್ಗೆ ಕನ್ನಡಿಗರ ಔದಾರ್ಯವನ್ನು ಯಾರು ದುರುಪಯೋಗ ಪಡಿಸಿಕೊಳ್ಳಲು ಬಿಡೆವು ಎಂದು ಛಲದಿಂದ ನುಡಿದಿದ್ದರು. 'ಈ ಛಲವೇ ಈತನೊಬ್ಬ ಸಮರ್ಥ ನಾಯಕ' ಎಂದು ಜನ ಒಪ್ಪಿಕೊಳ್ಳಲು ಕಾರಣವಾದವು. ಅರಸು ಸರ್ಕಾರದ ಸಾಧನೆ ಎಂದರೆ ಸ್ವಾತಂತ್ರ್ಯೋತ್ಸವ ದಿನಾಚರಣೆ ದಿನದಂದು ಜಿಲ್ಲಾಮಟ್ಟದಲ್ಲಿ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಘೋಷಣೆ ಮಾಡಿದಂತಹದು. ಕನ್ನಡ ಪರಿಪಕ್ವವಾಗಿ ಬೆಳೆಯಬೇಕೆಂಬ ದೃಷ್ಟಿಯಿಂದ ಕನ್ನಡ ಸಾಹಿತ್ಯ ಪರಿಷತ್ತು, ವಿಶ್ವವಿದ್ಯಾನಿಲಯ ಮತ್ತು ಇತರ ಸಂಸ್ಥೆಗಳಿಗೆ ಕನ್ನಡ ನಿಘಂಟು, ಕನ್ನಡ ವಿಶ್ವಕೋಶ, ಕಿರಿಯ ವಿಶ್ವಕೋಶ, ಕನ್ನಡ ಪಠ್ಯಪುಸ್ತಕಗಳು ಮೊದಲಾದ ಪ್ರಕಟಣೆಗಳು ಹಾಗೂ ಇತರ ಕನ್ನಡ ಚಟುವಟಿಕೆಗಳೆಂದು ಸುಮಾರು ಐವತ್ತು ಲಕ್ಷ ರೂಪಾಯಿಗಳಿಗೂ ಹೆಚ್ಚು ಧನಸಹಾಯ ನೀಡಿದರು.

ಮುಂದೆ ಹಂತ ಹಂತವಾಗಿ ರಾಜ್ಯದ ಎಲ್ಲಾ ಆಡಳಿತ ವ್ಯವಹಾರದಲ್ಲಿ ಕನ್ನಡವನ್ನು ಕಡ್ಡಾಯವಾಗಿ ಮಾಡುವ ಕಾರ್ಯಕ್ಕೆಗೊಂಡರು.

ದೇಶದಲ್ಲಿ ಭಾಷಾವಾರು ಆಧಾರದ ಮೇಲೆ ಪ್ರಾಂತ್ಯಗಳು ರಚನೆಯಾದರೂ, "ಭಾಷೆಯ ಆಧಾರದ ಮೇಲೆ ಒಂದು ಪ್ರಾಂತ್ಯದಿಂದ ಇನ್ನೊಂದು ಪ್ರಾಂತ್ಯಕ್ಕೆ ಹೋಗದ ಹಾಗೆ ಗೋಡೆಗಳನ್ನು ಹಾಕುವುದಕ್ಕೆ ಸಾಧ್ಯವಿಲ್ಲ."[೨] ಈಗ ಅದರ ಬಗ್ಗೆ ಇದು ಸರಿಯೇ ತಪ್ಪೇ ಎಂದು ನಾವು ಚರ್ಚೆ ಮಾಡುವುದು ಸರಿಯಲ್ಲ. ಆದರೆ ಒಂದು ವಿಚಾರದಲ್ಲಿ ಮಾತ್ರ ನಾವು ಚಿಂತನೆ ಮಾಡಬೇಕಿದೆ. ಪ್ರಾದೇಶಿಕವಾಗಿ ಭಿನ್ನ ಭಾಷೆಯನ್ನು ಮಾತನಾಡುವ ಜನರೆಲ್ಲ 'ಬೇರೆ ಜನರು' ಎನ್ನುವ ಅಭಿಪ್ರಾಯ ನಮ್ಮಲ್ಲಿ ಬೆಳೆದುದಾದರೆ ಅದು ದೇಶದ ಏಕತೆಗೆ ಒಂದು ಕೊಡಲಿ ಪೆಟ್ಟಾಗಲಿದೆ ಎನ್ನುವ ಮಾತನ್ನು ಅರಸರು ಪದೇ ಪದೇ ಹೇಳಿದ್ದು ಉಂಟು. ಅದಕ್ಕಾಗಿ ಕೇಂದ್ರ ಸರ್ಕಾರ ಅವರ ಮಾತೃಭಾಷೆಯನ್ನು ಕಲಿಯಲಿಕ್ಕೆ ಏರ್ಪಾಟನ್ನು, ಅದಕ್ಕೆ ಬೇಕಾದ ಸಹಾಯವನ್ನು, ಸಂಬಂಧಪಟ್ಟ ಸರ್ಕಾರ ಸಹಾಯ ಮಾಡಬೇಕಾಗುತ್ತದೆ. ಅದು ಅವರ ಕರ್ತವ್ಯ. ಭಾರತ ಸರ್ಕಾರ ನೇಮಿಸಿದ ಭಾಷಾ ಅಲ್ಪಸಂಖ್ಯಾತರ ಆಯೋಗ, ಭಾಷಾ ಅಲ್ಪಸಂಖ್ಯಾತರು ದೇಶದ ಯಾವುದೇ ಪ್ರಾಂತ್ಯದಲ್ಲಿದ್ದರೂ ಅವರಿಗೆ ಸಾಕಷ್ಟು ಪ್ರೋತ್ಸಾಹ ಕೊಡಬೇಕು ಎಂದು ಶಿಫಾರಸ್ಸು ಮಾಡಿತ್ತು. ಕರ್ನಾಟಕದಲ್ಲಿ ತೆಲುಗರು, ತಮಿಳರು, ಮರಾಠಿಗರು ಇದ್ದಾರೆ. ಈ ಅಲ್ಪಸಂಖ್ಯಾತರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಶಾಲೆಗಳನ್ನು ತೆಗೆಯುವುದಕ್ಕಾಗಿ ಅರಸುರವರು ಸರ್ಕಾರದಿಂದ ಪ್ರೋತ್ಸಾಹ ನೀಡಿದ್ದರು. ಮತ್ತು ಅವರಿಗೆ ವಿಶೇಷ ಶಿಕ್ಷಣ ಸವಲತ್ತುಗಳನ್ನು ಒದಗಿಸಿಕೊಟ್ಟಿದ್ದ ಇವರ ಸರ್ಕಾರದ ಸಾಧನೆಯಾಗಿದೆ. ಹೀಗೆ ಭಾಷೆ-ಭಾಷೆಗಳ ಮಧ್ಯೆ ಸಾಮರಸ್ಯವನ್ನು ಬೆಸೆಯಲು ಕಾರಣರಾದರು. ಯಾವುದೇ ಭಾಷೆಯನ್ನು ತಿರಸ್ಕರಿಸದೇ ಪರಸ್ಪರ ಭಾಷೆಯ ನಂಟು ಬೆಳೆಯಬೇಕು ಎನ್ನುವ ಅಭಿಪ್ರಾಯ ಅರಸು ಅವರದಾಗಿತ್ತು. ಪ್ರತಿಯೊಬ್ಬನಿಗೂ ಭಾಷೆಯ ಬಗ್ಗೆ ವಿಶೇಷ ಬಗೆಯ ಅಭಿಮಾನ ಇರಬೇಕು, ಆದರೆ ದುರಭಿಮಾನ ಇರಬಾರದು.

ಇತರ ಭಾಷೆಗಳನ್ನು ದ್ವೇಷಿಸಬಾರದು. ಅಭಿಮಾನಕ್ಕೂ, ದುರಭಿಮಾನಕ್ಕೂ ಬಹಳ ವ್ಯತ್ಯಾಸವಿದೆ. ಕೇವಲ ತನ್ನ ಭಾಷೆಯ ಬಗ್ಗೆ ಅಭಿಮಾನ ಹೊಂದಿದ್ದು, ಇನ್ನೊಂದು ಭಾಷೆಯನ್ನು ನಿಂದಿಸಿದರೆ ಭಾಷೆ-ಭಾಷೆಗಳ ಬಗ್ಗೆ ವೈಯಕ್ತಿಕ ಭಿನ್ನಭಿಪ್ರಾಯ ಹುಟ್ಟಿ ರಾಜ್ಯದಲ್ಲಿ ಕಲಹಗಳು ಉಂಟಾಗಬಹುದು. ಆದ್ದರಿಂದ ದೇವರಾಜ ಅರಸು ನಮ್ಮ ದೇಶ ಹಲವು ಭಾಷೆ-ಜನಾಂಗಗಳಿಂದ ಕೂಡಿರುವುದರಿಂದ ಪ್ರತಿಯೊಂದು ಜನಾಂಗ, ಭಾಷೆಗೆ ಮಹತ್ವ ಕೊಡವುದರ ಅಗತ್ಯತೆಯನ್ನು ಒತ್ತಿ ಹೇಳುತ್ತಿದ್ದರು. ಅಲ್ಲದೆ ಮಾತೃಭಾಷೆಯ ಜೊತೆಗೆ ಇತರ ಭಾಷೆಗಳಾದ ಹಿಂದಿ-ಇಂಗ್ಲೀಷನ್ನು ಕಲಿಯುವುದು ಅವಶ್ಯಕ. ಇದು ನಮ್ಮ ದೇಶದಲ್ಲಿನ ತ್ರಿಭಾಷಿಕ ಸೂತ್ರ ಎಲ್ಲೆಡೆ ಅನ್ವಯವಾಗಬೇಕು. ಕೇವಲ ಮಾತೃಭಾಷೆಯ ಅಭಿಮಾನವಿಟ್ಟುಕೊಂಡು ಅನ್ಯಭಾಷೆಯನ್ನು ಟೀಕಿಸುವುದು ಸರಿಯಲ್ಲ. ಒಂದು ಪ್ರಾಂತ್ಯದಿಂದ ಇನ್ನೊಂದು ಪ್ರಾಂತ್ಯಕ್ಕೆ ಸಂಚರಿಸಬೇಕಾದರೆ ಅಲ್ಲಿನ ಭಾಷೆ ಕಲಿಯುವುದು ಅವಶ್ಯಕ. ನಾವು ಒಂದೇ ಭಾಷೆಯನ್ನು ಕಲಿಯಬೇಕು, ನಮ್ಮ ಮಾತೃಭಾಷೆಗೆ ಮಾನ್ಯತೆ ಕೊಡಬೇಕು, ಬೇರೆ ಭಾಷೆ ಕಡೆಗೆ

ಗಮನ ಕೊಡಬಾರದು ಎಂದೆಲ್ಲ ಪ್ರಚಾರ ನಡೆಸುವುದು ಕೇವಲ ಒಂದು ವರ್ಗದ ರಾಜಕಾರಣಿಗಳು ಮಾತ್ರ. ಇದನ್ನು ಅರಸು ಪ್ರಬಲವಾಗಿ ವಿರೋಧಿಸುತ್ತಾ, ಭಾಷೆ-ಭಾಷೆಗಳ ನಡುವೆ ಸಾಮರಸ್ಯ ತರಲು ಆದ್ಯತೆ ನೀಡಿದರು. ನಮ್ಮ ದೇಶದಲ್ಲಿ ಎರಡು ಭಾವನಾತ್ಮಕ ಸಂಗತಿಗಳಿವೆ ೧. ಜಾತಿ ೨. ಭಾಷೆ "ಇದಲ್ಲ ಅದು, ಅದಲ್ಲ ಇದು"[೪] ಈ ಎರಡನ್ನು ಬಹಿರಂಗವಾಗಿ, ಅಂತರಂಗವಾಗಿ ಪ್ರಚಾರ ಮಾಡುತ್ತಾರೆ. ಇದು ಬಹಳ ಸುಲಭವಾದರೂ ಇದು ಕೇವಲ ತಾತ್ಕಾಲಿಕ ಓಟಿನ ದೃಷ್ಟಿಯಿಂದ ಅವರಿಗೆ ಇದು ಲಾಭದಾಯಕವಾಗಬಹುದು. ಆದರೆ ನಮ್ಮ ಜನಸಾಮಾನ್ಯರಲ್ಲಿ ದ್ವೇಷ ಮನಸ್ತಾಪಗಳು ಬೆಳೆಯಲಿಕ್ಕೆ ಇದು ಬಹುಮಟ್ಟಿಗೆ ಕಾರಣವಾಗುತ್ತವೆ ಎಂದು ಹೇಳುತ್ತಿದ್ದರು. ಇದನ್ನು ತಪ್ಪಿಸುವ ಸಲುವಾಗಿಯೇ ಅರಸು ಅವರು ವಿವಿಧ ಜನಾಂಗ, ಭಾಷೆಗಳನ್ನಾಡುವ ಜನರಿಂದ ತುಂಬಿರುವ ಈ ಕನ್ನಡನಾಡನ್ನು ಕಟ್ಟಿ ಅದರ ಸಮಗ್ರ ಅಭಿವೃದ್ಧಿಗೆ ಕಾರಣರಾದರು.

### ೬.೨. ಸಾಹಿತ್ಯ ಚಿಂತನೆ

ದೇವರಾಜ ಅರಸರು ಸಾಹಿತ್ಯ ಪ್ರೇಮಿಗಳಾಗಿದ್ದರು. ಸಾಹಿತ್ಯವನ್ನು ಬಹಳ ಆಸಕ್ತಿಯಿಂದ ಅಧ್ಯಯನ ಮಾಡಿ ತನ್ನದೇ ಆದ ಕೊಡುಗೆ ನೀಡಿದ್ದಾರೆ. ಇವರು ಕುವೆಂಪು, ಮಾಸ್ತಿ, ಬೇಂದ್ರೆ ಮತ್ತು ಕಾರಂತರ ಕೃತಿಗಳನ್ನಲ್ಲದೆ, ಕೆ.ಎಸ್. ನರಸಿಂಹಸ್ವಾಮಿಯವರ ಹಾಗೂ ಗಾಂಧೀಜಿ, ಲೋಹಿಯಾ, ಅಂಬೇಡ್ಕರವರ ಕೃತಿಗಳನ್ನು ಅಧ್ಯಯನ ಮಾಡುತ್ತಿದ್ದರು. ಮುಖ್ಯವಾಗಿ ಅರಸು ಅವರು ಕುವೆಂಪುರವರ ಕಾನೂರು ಹೆಗ್ಗಡತಿ ಮತ್ತು ರಾಮಾಯಣ ದರ್ಶನಂ ಕೃತಿಗಳಲ್ಲಿನ ಸಮಾನತಾ ತತ್ವಕ್ಕೆ ಮಾರುಹೋಗಿದ್ದರು. ಸಾಹಿತ್ಯವೆಂಬುದು ನಿಂತ ನೀರಲ್ಲ ಅದು ಸದಾ ಹರಿಯುವ ನೀರಿನಂತೆ ಬದಲಾವಣೆ ಹೊಂದುತ್ತಿರಬೇಕು. "ಸಾಹಿತ್ಯವು ಜನರ ಬದುಕಿಗೆ ನೆರವಾಗುವಂತೆ ಅವರ ಮಾನಸಿಕ ದಾಸ್ಯವನ್ನು ಹೋಗಲಾಡಿಸಿ, ಅದರಲ್ಲೂ ಆತ್ಮಗೌರವ ಮೂಡಿಸುವಂತ ಚೇತನ ಪೂರ್ಣ ಸಾಹಿತ್ಯ ಹೆಚ್ಚು-ಹೆಚ್ಚು ಸೃಷ್ಟಿಯಾಗಬೇಕು. ನಮಗೆ ಬೇಕಿರುವುದು ಪ್ರಚಾರ ಸಾಹಿತ್ಯವಲ್ಲ ವಿಚಾರ ಸಾಹಿತ್ಯ. ರಾಷ್ಟ್ರದ ಪುನರ್ ನಿರ್ಮಾಣಕ್ಕೆ ಜನತೆಯನ್ನು ಸನ್ನದ್ಧಗೊಳಿಸುವ ಒಟ್ಟುಗೂಡಿಸುವ ಪ್ರಚೋದಕ ಸಾಹಿತ್ಯ"[೫] ರಚನೆಯಾಗಬೇಕು ಎಂದು ಹೇಳುತ್ತಿದ್ದರು. ಇದು ಅವರ ಸಾಹಿತ್ಯಚಿಂತನೆಗೆ ಒಳ್ಳೆಯ ಉದಾಹರಣೆಯ ಮಾತುಗಳು.

ಅರಸು ೪೮ನೇ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಉದ್ಘಾಟಿಸಿ, ಮಾತನಾಡುತ್ತಾ-

> "ಸಾಹಿತಿಗಳ ಲೇಖನಿ ಶೃಂಗಾರ ಪುಷ್ಪವಾಗಿರದೆ ಕ್ರಾಂತಿಯ ಖಡ್ಗ ವಾಗಿರಬೇಕು. ಪ್ರಚಾರ ಸಾಹಿತ್ಯವನ್ನು ನಿಲ್ಲಿಸಿ, ವಿಚಾರ ಸ್ವಾತಂತ್ರ್ಯಕ್ಕೆ ಜನರನ್ನು ಒಪ್ಪ ಗೊಳಿಸುವ ಸಾಹಿತ್ಯದ ಸೃಷ್ಟಿಗೆ ಸನ್ನದ್ಧರಾಗಬೇಕು. ಆದರ್ಶದ ದೃಷ್ಟಿಯಿಂದ ದೂರ ನಿಂತು ವಾಸ್ತವಿಕತೆಗಳ ಕಡೆಗೆ ತಿರುಗಿದ ಸಾಹಿತ್ಯವಿಂದು ಆಸ್ಫೋಟದ ಮತ್ತು ರಾಜಕೀಯ ಸಿದ್ಧಾಂತಗಳ ಮಾರ್ಪಾಡುಗಳು ಬೆಳಕಿನಲ್ಲಿ ತನ್ನ ಹೊಸ ಪಾತ್ರವನ್ನು ನಿರ್ವಹಿಸಲು ಅಣಿಯಾಗಬೇಕು"[೬]

- ಎಂದು ಸಾಹಿತಿಗಳಿಗೆ ಕರೆ ನೀಡಿದರು.

ಸಾಹಿತಿಗಳು ಜನ-ಜೀವನದಲ್ಲಿ ನಿಕಟವಾದ ಸಂಪರ್ಕ ಬೆಳೆಸಬೇಕಾಗಿದೆ. ಯಾವುದೇ ರೀತಿಯ ಮಡಿವಂತಿಕೆ ಬಿಟ್ಟು ಬಯಲಿಗೆ ಬರಬೇಕು. ಜನಸಾಮಾನ್ಯರ ಸುಖ-ದುಃಖಗಳಲ್ಲಿ ಭಾಗಿಯಾಗಬೇಕು. ಕೇವಲ ವೈಯಕ್ತಿಕ ಭಾವನೆ, ಅನುಭವಗಳ ಅಭಿವ್ಯಕ್ತಿಯಾಗಬಾರದು. ಅದು ಸಮಸ್ತ ಮಾನವ ಜನಾಂಗಕ್ಕೆ ನೆರವಾಗಬೇಕು. ಅಂದಾಗ ಮಾತ್ರ ಅವರ ಸಾಹಿತ್ಯಕ್ಕೆ ಒಂದು ಬೆಲೆ, ನೆಲೆ ಇರುತ್ತದೆ. ಈಗ ನಮಗೆ ಬೇಕಿರುವುದು ಹೆಚ್ಚಿನ ರಾಷ್ಟ್ರೀಯ ಮನೋಭಾವನೆ, ಶ್ರಮಪೂರ್ಣ ದುಡಿಮೆ. ಅಂಥ ಭಾವನೆ ಮೈಗೂಡಿಸಿಕೊಂಡು ಕೃತಿಗಳ ಮೂಲಕ ಸ್ಫೂರ್ತಿ ನೀಡುವುದು ಪ್ರತಿಯೊಬ್ಬ ಸಾಹಿತಿಯ ಜವಾಬ್ದಾರಿಯಾಗಿದೆ. ಅಂಥ ಸೃಜನಶೀಲ ಸಾಹಿತ್ಯ ತಮ್ಮಿಂದ ಸೃಷ್ಟಿಯಾಗಬೇಕು. ತಾವು ಸಮಾಜದ ಮುನ್ನಡೆಗೆ ಎಲ್ಲಾ ಬಗೆಯ ವರ್ಣ ಹಾಗೂ ವರ್ಗಬೇಧಗಳನ್ನು ಮೆಟ್ಟಿನಿಲ್ಲುವ ಧೀಮಂತರಾಗಬೇಕು. ಪಾಂಡಿತ್ಯ ಅರಮನೆಯಲ್ಲಿ ನೆಮ್ಮದಿಯಾಗಿರಬೇಕೆನ್ನುವುದನ್ನು ಬಿಟ್ಟು, ಸಾಮಾನ್ಯರ ಜನ-ಜೀವನದಲ್ಲಿ ನಿಕಟ ಸಂಪರ್ಕ ಬೆಳೆಸಬೇಕು ಎನ್ನುವ ನಿಲುವು ಅವರದಾಗಿತ್ತು.

ರಾಷ್ಟ್ರದ ಸಮಸ್ತ ಹಾಗು-ಹೋಗುಗಳಲ್ಲಿ ಹೃತ್ಪೂರ್ವಕವಾಗಿ ಸಾಮಾನ್ಯ ಜನತೆ ಪಾಲ್ಗೊಳ್ಳುವಂತೆ ಪ್ರೇರಣೆ ನೀಡುವಂತ ಸರಳ ಸಾಹಿತ್ಯ ನಿರ್ಮಾಣ ಹೆಚ್ಚಾಗ:ಬೇಕು. ವಿಜ್ಞಾನ-ತಂತ್ರಜ್ಞಾನ, ಅರ್ಥಶಾಸ್ತ್ರ, ತಾಂತ್ರಿಕ ಕುಶಲತೆ, ಹೀಗೆ ಆಧುನಿಕ ಜೀವನದ ಅನಂತ ಮುಖಗಳನ್ನು ಒಳಗೊಂಡ ಕೃತಿಗಳ ರಚನೆಗೆ ಒತ್ತು ನೀಡುವಂತೆ ಸಾಹಿತಿಗಳನ್ನು ಪ್ರೇರೇಪಿಸುತ್ತಿದ್ದರು. ಒಟ್ಟಿನಲ್ಲಿ ವೈಯಕ್ತಿಕ ಪ್ರಜ್ಞೆಯ ವಿಕಾಸಕ್ಕೆ ಸಾಹಿತ್ಯ ಚೇತನ ಶಕ್ತಿಯಾಗಬೇಕು. ಅದೇನೆ ಇದ್ದರು ಬೇರಾವ ಭಾಷೆಗಳಿಗೂ ಕಡಿಮೆಯಿಲ್ಲದಷ್ಟು ವೈವಿಧ್ಯಪೂರ್ಣವಾಗಿ ಸಾಹಿತ್ಯ ಬೆಳೆಯಬೇಕು ಎನ್ನುವ ವಿಚಾರ ಅವರದಾಗಿತ್ತು.

ಅದಕ್ಕೆ ಇರಬೇಕು ಒಂದು ಕಡೆ ವರಕವಿ ಬೇಂದ್ರೆಯವರು ಹೀಗೆ ಬರೆಯುತ್ತಾರೆ-

> "ಅವರ ಮಾತಿನ ಸಾಹಿತ್ಯದ ಸಿಂಚನಕ್ಕೆ ಯಾವ ಸಾಹಿತಿಯ ಸರ್ಟಿಫಿಕೇಟು ಬೇಕಾಗಿಲ್ಲ ಅವರ ಭಾಷಣಗಳ ಸಂಗ್ರಹವನ್ನು ಓದಿದವರೆಲ್ಲ ಇದೇ ರೀತಿಯ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಆ ಮಾತುಗಳಲ್ಲಿ ಸಾಹಿತ್ಯದ ಗಂಧವಿರುವುದು ನೂರಕ್ಕೆ ನೂರು ಸತ್ಯ. ಆ ಮಾತುಗಳಲ್ಲಿ ಏನೋ ಒಂದು 'ಓದಿನ ಛಾಪು' ಅರಿವಿನ ಪ್ರಪಂಚ ಇರುವುದು ಸತ್ಯವೇ ಆಗಿದೆ."[೬]

ಒಟ್ಟಿನಲ್ಲಿ ಅರಸು ಅವರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಕನ್ನಡ ನಾಡು-ನುಡಿಯ ಸೇವೆಗಾಗಿ ಸರ್ಕಾರ ಅತ್ಯಂತ ಆಸಕ್ತಿ ತಾಳಿತ್ತು. ಹೀಗಾಗಿ ಕನ್ನಡ ನಿಘಂಟು, ವಿಶ್ವಕೋಶ, ಕಿರಿಯರ ವಿಶ್ವಕೋಶ ಮೊದಲಾದ ಬೃಹತ್ ಸಾಹಿತ್ಯ ಕೃತಿಗಳ ಪ್ರಕಟಣೆಗೆ ಸರ್ಕಾರದ ವತಿಯಿಂದ ಆರ್ಥಿಕ ಸಹಾಯ ನೀಡಿದ್ದರು. ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಎಲ್ಲಾ ಹಂತದಲ್ಲಿ ಜಾರಿಗೆ ತಂದಿದೆ. ಇದು ಅರಸು ಅವರು ಕನ್ನಡನಾಡು ನುಡಿಗೆ ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಅಪಾರ ಪ್ರೋತ್ಸಾಹವನ್ನು ಪ್ರತಿಬಿಂಬಿಸುತ್ತದೆ.

ಜನಪದ ಸಾಹಿತ್ಯದ ಬಗ್ಗೆ ಹೇಳುತ್ತಾ; ಇಡೀ ಜನಾಂಗದ ಸಂಸ್ಕೃತಿ ಸಂಪತ್ತಿನ ಅಭಿವ್ಯಕ್ತಿಯಾಗಿರುವ ಜನಪದ ಸಾಹಿತ್ಯಕ್ಕೆ ಗೌರವ ಸಲ್ಲಿಸುವುದು ಸಮಾಜದ ಲಕ್ಷಣ. ಜನಪದ ಸಾಹಿತ್ಯ ಜನಾಂಗದ ಸಮಗ್ರ ಪ್ರಜೆಯ ತಾಯಿಯ ಬೇರು. ಜನಪದ ಸಾಹಿತ್ಯ ಯಾವುದೇ ಪ್ರಯತ್ನದ ಫಲವಲ್ಲ; ಅದು ಅನುಭವದ ಆಳದಿಂದ ಮೂಡಿಬಂದ ಸಹಜ ಅಭಿವ್ಯಕ್ತಿ. ಅಲ್ಲಿ ಯಾವುದೇ ಪ್ರಶಸ್ತಿ, ಪ್ರತಿಷ್ಠೆಗಳ ಫಲಾಪೇಕ್ಷೆ ಇಲ್ಲ. ಅನಾಮಿಕತೆ, ಸರಳತೆ, ಜನಪದ ಸಾಹಿತ್ಯದ ಮೂಲ ಸೂತ್ರಗಳು. ಅದರಲ್ಲಿರುವುದು ಮಣ್ಣಿನ ವಾಸನೆ ಬನ್ನಿ ಅಂತಲೇ ಅದು ಜೀವನದ ಸಂದೇಶವಾಗಿದೆ ಎಂದು ಅರಸು ಅವರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

"ಬರ ಬಂದಾಗ ಮಗ ಉಣ್ಣೋದು ಕಲಿತ" ಎಂಬ ಗಾದೆ ಇದೆ. ಜನಪದ ಕಲೆ ಪೂರ್ತಿಯಾಗಿ ಬತ್ತಿ ಹೋದಾಗ ಅದನ್ನು ಉದ್ಧರಿಸುತ್ತೇನೆಂದು ಹೊರಡುವುದಕ್ಕೆ ಬದಲು ಈಗಲೇ ಕಾರ್ಯೋನ್ಮುಖ ರಾಗಬೇಕು. ಇಷ್ಟೊಂದು ಜನ ಸಾಹಿತಿಗಳು ಇದ್ದೂ ಜನಪದ ಸಾಹಿತ್ಯ ಸೊರಗಬಾರದು. "ಸೋನೆ ಇದ್ರು ಬಿಸಿ ನೀರಿಗೆ ದರಿದ್ರ"[೮] ಆಗಬಾರದು ಎಂದು ಸಾಹಿತಿಗಳಿಗೆ ಈ ಜನಪದ ಸಾಹಿತ್ಯದ ಮಹತ್ವವನ್ನು ಕುರಿತು ಕಿವಿಮಾತು ಹೇಳಿದರು.

**೬.೩. 'ಕರ್ನಾಟಕ' ನಾಮಕರಣದ ಚಿಂತನೆ**

ಅರಸು ಅವರ ರಾಜಕಾರಣದ ಅವಧಿಯಲ್ಲಿ ನಾಡಿಗೆ 'ಕರ್ನಾಟಕ' ಎಂದು ನಾಮಕರಣ ಮಾಡಿದ್ದು ಒಂದು ಐತಿಹಾಸಿಕ ಘಟನೆಯಾಗಿದೆ. ಕನ್ನಡ ನಾಡು-ನುಡಿ ಬಗ್ಗೆ ಅಪಾರ ಪ್ರೀತಿ ಹೊಂದಿದ್ದ ದೇವರಾಜ ಅರಸರು ವಿವಿಧ ಪ್ರಾಂತಗಳಾಗಿ ಹರಿದು ಹಂಚಿಹೋಗಿದ್ದ ನಾಡನ್ನು ಒಂದು ಗೂಡಿಸುವಲ್ಲಿ ಮಹತ್ವದ ಪಾತ್ರವಹಿಸಿದ್ದರು. ಈ ನಾಡು ಹೊಸ ಹುಟ್ಟು ಪಡೆದದ್ದು ಇವರ ಆಳ್ವಿಕೆಯ ಅವಧಿಯಲ್ಲಿಯೇ. ಕರ್ನಾಟಕದ ಮುನ್ನಡೆಗೆ ಅರಸು ಅವರ ಕೊಡುಗೆ ಅನನ್ಯವಾದದ್ದು. ಕರ್ನಾಟಕ ತನ್ನ ಉನ್ನತ ಪರಂಪರೆಯನ್ನು ಎತ್ತಿಹಿಡಿಯಬೇಕು, ಅದನ್ನು ಕಾಪಾಡಿಕೊಂಡು ಬರಬೇಕೆಂಬುದು ಅವರ ನಿಲುವಾಗಿತ್ತು. ಕರ್ನಾಟಕದಲ್ಲಿ ಕಾಂಗ್ರೆಸ್ ಬಹುಮತದಲ್ಲಿದ್ದರೂ, ಆಡಳಿತ ಅಧಿಕಾರ ಹೊಂದಿದ್ದರೂ, ಜಾತಿ ಬೇಧ-ಭಾವದಿಂದ ಅನೇಕ ಭಿನ್ನಾಭಿಪ್ರಾಯಗಳ ಒತ್ತಾಯಕ್ಕೆ ಮಣಿದು ಈ ಹಿಂದಿನ ಮುಖ್ಯಮಂತ್ರಿಗಳಾದ ನಿಜಲಿಂಗಪ್ಪ, ಬಿ.ಡಿ. ಜತ್ತಿ, ಎಸ್.ಆರ್. ಕಂಠಿ, ವೀರೇಂದ್ರ ಪಾಟೀಲರಂತಹ ಪ್ರಬಲರು 'ಕರ್ನಾಟಕ' ಎಂದು ನಾಮಕರಣ ಮಾಡುವಲ್ಲಿ ವಿಫಲವಾಗಿದ್ದರು. ಆದರೆ ಅರಸು ನಾಡಿಗೆ 'ಕರ್ನಾಟಕ' ಎಂದು ನಾಮಕರಣ ಮಾಡಿ ಅತ್ಯಂತ ಜಟಿಲವೂ ಆಗಿದ್ದ ಈ ಭಾವನಾತ್ಮಕ ಸಮಸ್ಯೆಯನ್ನು ತಮ್ಮ ಜಾಣ್ಮೆಯಿಂದ ಪರಿಹರಿಸಿ ರಾಜಕೀಯ ಮುತ್ಸದ್ಧಿ ಎನಿಸಿಕೊಂಡರು. ಜನತೆಯಲ್ಲಿ ನಂಬಿಕೆ, ಭರವಸೆ, ವಿಶ್ವಾಸವನ್ನು ಬೆಳೆಸಿಕೊಂಡರು. ಈ ಒಂದು ಪ್ರಕರಣದಿಂದ ಅವರ ವರ್ಚಸ್ಸು ಇಡೀ ರಾಜ್ಯದಲ್ಲಿ ವಿಶೇಷ ಜನಪ್ರಿಯತೆಗೆ ಪಾತ್ರರಾದರು.

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ದೇಶ ಮತ್ತೊಮ್ಮೆ ವಿಂಗಡನೆ ಆಗಬೇಕೆನ್ನುವ ವಿಚಾರ ಬಂತು. ಬ್ರಿಟಿಷರ ಕಾಲದಲ್ಲಿ ರಾಜ್ಯಗಳ ವಿಂಗಡನೆಯು ಒಂದು ಗೊತ್ತಾದ ಜನರಿಗೆ

ಉಪಯುಕ್ತವಾದಂಥ ವ್ಯವಹಾರಕ್ಕೆ ಹೊಂದಿಕೊಂಡು ಹೋಗತಕ್ಕಂತ ಸಿದ್ಧಾಂತದ ಮೇಲೆ ಆಗಿರಲಿಲ್ಲ. ಬ್ರಿಟಿಷರ ಸಾಮ್ರಾಜ್ಯ ಪ್ರಬಲವಾಗಿ ನಡೆದುಕೊಂಡು ಹೋಗುವ ದೃಷ್ಟಿಯಿಂದ ಮಾತ್ರ ಈ ವಿಂಗಡಣೆ ಇತ್ತು. ಸ್ವಾತಂತ್ರ್ಯನಂತರ ಜನಸಾಮಾನ್ಯರು ತಮ್ಮ ಪ್ರಜಾಸತ್ತೆ ಪುಷ್ಟಿಯಾಗಿ ಬೆಳೆಯುವ ದೃಷ್ಟಿಯಿಂದ, ಜನತೆಯ ಮತ್ತು ಸರ್ಕಾರದ ವ್ಯವಹಾರ ಸುಗಮವಾಗಿ ನಡೆಯುವ ದೃಷ್ಟಿಯಿಂದ ಮತ್ತು ನಮ್ಮ ದೇಶ, ನಮ್ಮ ಭಾಷೆ ಹಾಗೂ ಭೂಪ್ರದೇಶಕ್ಕೆ ಸಂಬಂಧಪಟ್ಟಂತ ಕೆಲವು ಗುಣಗಳು ಇವುಗಳನ್ನು ಅನುಸರಿಸಿ ರಾಜ್ಯ ಪುನರ್‌ವಿಂಗಡನೆಯಾಗಬೇಕು ಎಂದು ಜನತೆಯ ಅಭಿಪ್ರಾಯ ಬಂದು ಅದರ ಪ್ರಕಾರ ನಮ್ಮ ದೇಶ ಅನೇಕ ರಾಜ್ಯಗಳು ಬೇರೆ ಬೇರೆ ರೂಪವನ್ನೇ ವಿಂಗಡಣೆಯ ಪರಿಣಾಮದಿಂದಾಗಿ ಪಡೆದವು.

ಇದರಂತೆ ನಮ್ಮ ರಾಜ್ಯವು ಕೂಡ ಒಂದು ದೊಡ್ಡ ಬದಲಾವಣೆಯನ್ನು ಹೊಂದಿದೆ. ಈ ಬದಲಾವಣೆ ಎಂದರೆ ಮೈಸೂರು ರಾಜ್ಯ ನಮಗೆ ಸ್ವಾತಂತ್ರ್ಯ ಬರುವುದಕ್ಕೆ ಮುಂಚೆ ಸರ್ವಾಧಿಕಾರಿಗಳ ಆಳ್ವಿಕೆಯಲ್ಲಿ ಇದ್ದಂತ ರಾಜ್ಯ. ೧೯೫೬ರಲ್ಲಿ ರಾಜ್ಯ ಪುನರ್‌ವಿಂಗಡನೆಯ ಪ್ರಕಾರ ಇದು ದೊಡ್ಡದಾಗಿ ವಿಸ್ತಾರಗೊಂಡಿತು. ಭಾಷಿಕ, ಪ್ರಾದೇಶಿಕವಾಗಿ ವಿವಿಧ ಕಡೆ ಹಂಚಿಹೋಗಿದ್ದ ಕನ್ನಡ ಭಾಷಿಗರೆಲ್ಲಾ ಏಕೀಕೃತ ಕರ್ನಾಟಕದಿಂದಾಗಿ ಒಂದೆಡೆ ಬೆರೆಯುವಂತಾಯಿತು. ಸಾಂಸ್ಕೃತಿಕವಾಗಿ ಒಂದೆಡೆ ರೂಪುಗೊಳ್ಳು ವಂತಾಯಿತು.

ಬ್ರಿಟಿಷರ ಒಡೆದು ಆಳುವ ನೀತಿಯಿಂದಾಗಿ ಭಾರತದಲ್ಲಿ ಅನೇಕ ಪ್ರಾಂತ್ಯ ವಿಂಗಡನೆಯು ಒಂದು ಸಂಸ್ಕೃತಿಯ ಒಟ್ಟಂದವನ್ನು ಕೆಡಿಸಿತ್ತು. ಅಂತೆಯೇ ಬಾಂಬೆ ಕರ್ನಾಟಕ, ಮದ್ರಾಸ್ ಕರ್ನಾಟಕ, ಹೈದ್ರಾಬಾದ್ ಕರ್ನಾಟಕವೆಂದು ವಿವಿದೆಡೆ ಹಂಚಿದ್ದ ಕನ್ನಡನಾಡೀಗ ಒಂದಾಯಿತು. ಇದರಿಂದಾಗಿ ಎಲ್ಲರೂ ಒಟ್ಟಾಗಿ ಸೇರಿದ ೧೯೫೬ ನವೆಂಬರ್ ೧ ರಂದು ಕನ್ನಡ ನಾಡು ಒಂದಾಯಿತು. ಆದರೆ ಈ ನಾಡಿನ ಹಿರಿಮೆ, ಸಂಸ್ಕೃತಿ ಮತ್ತು ಒಗ್ಗಟ್ಟಿನ ಸಂಕೇತವಾದ ಹೆಸರು ಇರದೇ ಇದ್ದದ್ದು ಜನತೆಯ ಅಂತರಾಳವನ್ನು ಕಲುಕಿತು. ಆದರೆ ಸುಮಾರು ೧೭ ವರ್ಷಗಳ ನಂತರ ಕನ್ನಡಿಗರ ಕನಸು ದೇವರಾಜ ಅರಸು ೧ ನವೆಂಬರ್ ೧೯೭೩ ರಂದು ನಾಡಿಗೆ 'ಕರ್ನಾಟಕ' ಎಂದು ನಾಮಕರಣ ಮಾಡುವುದರೊಂದಿಗೆ ಸಮಸ್ತ ಕನ್ನಡಿಗರ ಬಹುದಿನದ ಕನಸನ್ನು ನನಸಾಗಿಸಿದರು.

ಈ 'ವಿಶಾಲ ಮೈಸೂರು ರಾಜ್ಯ' ಅಸ್ತಿತ್ವಕ್ಕೆ ಬಂದ ಮೇಲೆ ಈ ರಾಜ್ಯದ ಹೆಸರು ಹಿಂದಿನಿಂದ ಬಂದಂತ ಹೆಸರು ಇರಬೇಕೆ ಅಥವಾ ಬೇಡವೆ ಎನ್ನುವ ಭಿನ್ನಾಭಿಪ್ರಾಯ ಹುಟ್ಟಿಕೊಂಡಿತು. ಒಂದೇ ಜನ ಒಂದೇ ಭಾಷೆಯಾದ ಮೇಲೆ ಹೆಸರು ಬದಲಿ ಮಾಡಬೇಕೆನ್ನುವ ವಿಚಾರ ನಮ್ಮ ಇಡೀ ರಾಜ್ಯದ ಜನತೆಯ ಮನಸ್ಸನ್ನು ಸೆಳೆಯಿತು. ಈ ಒಂದು ವಿಷಯ ನಿಜಲಿಂಗಪ್ಪ ಸರ್ಕಾರದಿಂದ ಹಿಡಿದು, ವೀರೇಂದ್ರ ಪಾಟೀಲರ ಸರ್ಕಾರದವರೆಗೆ ಮುಂದುವರಿಯಿತು. ಈಗಾಗಲೇ ಇರತಕ್ಕ ಹೆಸರು ಅದೇ ಏಕೆ ಇರಬಾರದು ಎನ್ನುವ ವಾದ ದಕ್ಷಿಣಭಾರತದ ಪ್ರಬಲ ವರ್ಗದ ರಾಜಕೀಯ ಮುಖಂಡರ

ಮಾತಾಗಿತ್ತು. ಕಾಂಗ್ರೆಸ್ ಆಡಳಿತ ಪಕ್ಷವೂ ಕೂಡ ಈ ಬಗ್ಗೆ ಸಾಕಷ್ಟು ಚರ್ಚೆ ನಡೆಸಿತ್ತು. ಮೈಸೂರು ವಿಶಾಲವಾಗುವ ಕಾಲದಲ್ಲಿ ಹೆಸರಿನ ಬದಲಾವಣೆಯಾಗುವುದು ನಿಲ್ಲುವುದಕ್ಕೆ ಕಾರಣವೂ ಇತ್ತು. ಅದು ರಾಜಕೀಯ ಕಾರಣವೂ ಹೌದು, ಒತ್ತಡದ ಸನ್ನಿವೇಶವೂ ಹೌದು. ಭಾಷೆ ಆಧಾರದ ಮೇಲೆ ರಾಜ್ಯ ಪುನರ್‌ವಿಂಗಡಣೆ ಬಗ್ಗೆ ಪ್ರಮುಖ ನಾಯಕರೇ ಭಿನ್ನಾಭಿಪ್ರಾಯ ವ್ಯಕ್ತಪಡಿಸಿದ್ದರು. ಈ ಸಂದರ್ಭದಲ್ಲಿ ಆಡಳಿತ ದೃಷ್ಟಿಯಿಂದ, ಶಾಸ್ತ್ರೀಯ ದೃಷ್ಟಿಯಿಂದ ರಾಜ್ಯ ಎರಡಾಗಬೇಕು ಎನ್ನುವವರಲ್ಲಿ ಅರಸು ಒಬ್ಬರಾಗಿದ್ದರು. ಮತ್ತು ನಮ್ಮ ನಾಡಿನ ಜನತೆ ದೃಷ್ಟಿಯಿಂದ, ಅವರ ಆರ್ಥಿಕ, ಅಭಿವೃದ್ಧಿ, ಸಂಸ್ಕೃತಿಯ ಹಾಗೂ ಭಾವೈಕ್ಯತೆ ದೃಷ್ಟಿಯಿಂದ ರಾಜ್ಯ ಎರಡಾಗ ತಕ್ಕಂಥದ್ದು ಸಾಧುವಲ್ಲ ಎನ್ನುವ ಬಹುಜನರ ತೀರ್ಮಾನಕ್ಕೆ ಅರಸು ಅವರು ಒಪ್ಪಿಕೊಂಡಿದ್ದು ಉಂಟು.

೧೯೬೭ರ ಚುನಾವಣೆಗೆ ಮುಂಚೆ ನಾಡಿನ ನಾಮಕರಣದ ಬಗ್ಗೆ ಶಾಸನ ಸಭೆಯಲ್ಲಿ ಚರ್ಚೆಗೆ ಬಂದಿತಾದರೂ ಯಾವುದೇ ತೀರ್ಮಾನವಾಗಲಿಲ್ಲ. ಆಗ ಅರಸು ಈ ಶಾಸನಸಭೆಯ ಸದಸ್ಯರಾಗಿದ್ದರು. ಅಷ್ಟೇ ಅಲ್ಲದೆ ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿ ಮಂತ್ರಿಯೂ ಆಗಿದ್ದರು. ಆಗ ಅರಸು ಅವರು ಯಾವ ಒಂದು ಪಕ್ಷ ಬಹುಮತ ಪಡೆದು ಆಡಳಿತ ನಡೆಸುತ್ತದೆಯೋ, ಆ ಪಕ್ಷ ಮನಸ್ಸು ಮಾಡದೇ ಹೋದರೆ ಇಂಥದೆಲ್ಲ ಕಾರ್ಯಗತವಾಗುವುದಕ್ಕೆ ಸಾಧ್ಯವಾಗುವುದಿಲ್ಲ ಎಂದು ಅಭಿಪ್ರಾಯ ಪಟ್ಟಿದ್ದರು.

ಆದರೂ ಆಡಳಿತರೂಢ ಕಾಂಗ್ರೆಸ್‌ಪಕ್ಷ ಈ ಕುರಿತು ಬಹಳ ಚರ್ಚೆ ನಡೆಸಿತ್ತು. ಆ ಚರ್ಚೆಯಲ್ಲಿ ಯಾವ ಹೆಸರಿಡಬೇಕು ಎನ್ನುವುದರಲ್ಲಿ ಭಿನ್ನಾಭಿಪ್ರಾಯ ಬಂತು. 'ಕರ್ನಾಟಕ' ಎಂದು ಹೆಸರಿಡಬೇಕೆ, 'ಮೈಸೂರು ಕರ್ನಾಟಕ' ಎನ್ನಬೇಕೆ ಅಥವಾ 'ಮೈಸೂರು ಕನ್ನಡ ನಾಡು' ಎಂದು ಹೆಸರಿಡಬೇಕೆ ಎನ್ನುವ ಕುರಿತು ಆ ಪಕ್ಷದಲ್ಲಿ ಬಹಳವಾಗಿ ಚರ್ಚೆಗೆ ಬಂದಿತು. ಆದರೂ ಅಂತಿಮವಾಗಿ 'ಮೈಸೂರು ಕನ್ನಡ ನಾಡು' ಎಂದು ಕರೆಯೋಣವೆಂದು ಕೆಲವರು ಸೂಚಿಸಿದರು. ಆದರೆ ಅರಸು ಈ ಸಭೆಯಲ್ಲಿ ಎದ್ದು ನಿಂತು ಈಗ ಈ ಠರಾವು ತರುವುದು ಸರಿಯಲ್ಲ ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು. ಸದ್ಯಕ್ಕೆ ಇದನ್ನು ಕೈಬಿಡಬೇಕೆಂದು ಕೂಡ ಹೇಳಿದರು.

೧೯೬೯ ರಲ್ಲಿ ಜುಲೈ ತಿಂಗಳಲ್ಲಿ ಕಾಂಗ್ರೆಸ್ ಪಕ್ಷದ ಚರಿತ್ರೆ ಬದಲಾಯಿತು. ಅದೇ ರೀತಿ ಇಡೀ ಭಾರತದೇಶದ ರಾಜಕೀಯ ಚರಿತ್ರೆಯಲ್ಲಿಯೂ ಕೂಡ ಬದಲಾವಣೆಯಾಯಿತು. ಮುಂದೆ ೧೯೭೦-೭೧ ರಲ್ಲಿ ನಡೆದಂಥ ಮಧ್ಯಂತರ ಚುನಾವಣೆಯ ಕಾಲದಲ್ಲಿ ಈ ನಾಮಕರಣದ ಬಗ್ಗೆ ಆಂತರಿಕ ಹಾಗೂ ಬಹಿರಂಗವಾಗಿ ವಾದ-ವಿವಾದಗಳು ಶುರುವಾದವು. ಈ ಚುನಾವಣೆಯ ನಂತರ ೧೯೭೨ರ ಚುನಾವಣೆ ಸಂದರ್ಭದಲ್ಲಿ ಈ ಹೆಸರಿನ ವಿಚಾರ ಬಹಳ ಪ್ರಬಲವಾಗಿ ಜನಸಾಮಾನ್ಯರ ಮನಸ್ಸನ್ನು ಸೆಳೆಯಿತು. ಈ ಸಂದರ್ಭದಲ್ಲಿ 'ಆರ್' ಕಾಂಗ್ರೆಸ್‌ನ ಕನ್ವಿನರ್ ಆಗಿ ಕೆಲಸ ಮಾಡುತ್ತಿದ್ದ ಅರಸು ಅವರು ಶ್ರೀರಂಗಪಟ್ಟಣದ ಒಂದು ಸಮಾರಂಭದಲ್ಲಿ ಭಾಗವಹಿಸಿ, ಮಾತನಾಡುತ್ತಾ ನಾಡಿನ ನಾಮಕರಣ ಕುರಿತು ಪ್ರಸ್ತಾಪ ಮಾಡಿದರು. ಈ ನಾಡಿನ ನಾಮಕರಣ ಒಂದು ದೊಡ್ಡ ಸಮಸ್ಯೆ

ಎಂದು ಪರಿಗಣಿಸಬೇಕಾಗಿಲ್ಲ, ರಾಜ್ಯದಲ್ಲಿ ಸಾಕಷ್ಟು ಸಮಸ್ಯೆಗಳು ಬಾಕಿ ಇವೆ. ಆದಕಾರಣ ಹೆಸರು ಬದಲಾವಣೆ ಮಾಡುವುದರಿಂದ ಎಲ್ಲವೂ ಕಾರ್ಯಗತವಾಗುತ್ತವೆ ಎಂದು ಹೇಳುವುದು ಸರಿಯಲ್ಲ ಎಂದು ಹೇಳಿದರು. ವೈಯಕ್ತಿಕವಾಗಿ ಅರಸು ಅವರು ಯಾವುದಕ್ಕೂ ಅಂಟಿಕೊಂಡವರಲ್ಲವಾದರೂ ಹೆಸರು ಬದಲಾವಣೆ ಮಾಡಬೇಕು, ಮಾಡಕೂಡದು ಎಂದು ಹೇಳುವುದಿಲ್ಲ ಎನ್ನುವ ಧಾಟಿಯಲ್ಲಿ ಮಾತನಾಡಿದರು. ಈ ಸಂದರ್ಭದಲ್ಲಿ ಅರಸು ಅವರ ಬಗ್ಗೆ ಹಲವಾರು ಟೀಕೆಗಳು ಕೇಳಿಬಂದವು. ನೀವು ನಾಡಿನ ನಾಮಕರಣಕ್ಕೆ ವಿರುದ್ಧವಾಗಿದ್ದೀರಿ, ಈ ಬಗ್ಗೆ ನಿಮ್ಮ ಮೇಲೆ ಪ್ರಚಾರ ಆಗಿದೆ. ಈ ಕುರಿತು ನಿಮ್ಮ ಅಭಿಪ್ರಾಯವೇನು? ಎಂದು ಪತ್ರಕರ್ತರು ಕೇಳಿದ ಪ್ರಶ್ನೆಗೆ ಅರಸು ಅವರು 'ಜನಸಾಮಾನ್ಯರ ಅಭಿಪ್ರಾಯದಲ್ಲಿ ಅವರಿಗೆ ಈ ಬದಲಾವಣೆಯಿಂದ ಒಂದು ಆನಂದ, ಒಂದು ತೃಪ್ತಿ, ಭಾವೈಕ್ಯತೆ ಬರುವುದಾದರೆ ನನಗೆ ಸಂತೋಷ' ಎಂದು ತಮ್ಮ ವೈಯಕ್ತಿಕ ಅಭಿಪ್ರಾಯ ವ್ಯಕ್ತಪಡಿಸಿದರು. ಮುಂದುವರೆದು ಅವರು -

> "ಒಂದು ವೇಳೆ ಚುನಾವಣೆ ಆದ ಮೇಲೆ ನಮ್ಮ ಪಕ್ಷ ಬಹುಮತ ಪಡೆದು ಅಧಿಕಾರಕ್ಕೆ ಬಂದರೆ, ಸಭೆಯಲ್ಲಿ ಚರ್ಚೆ ಮಾಡಿ, ಶಾಸನಸಭೆಯಲ್ಲಿ ಜನತೆಯ ಪ್ರತಿನಿಧಿಗಳು ಯಾರು ಇರುತ್ತಾರೋ ಅವರ ಅಭಿಪ್ರಾಯದಂತೆ ಹೋಗುವುದಕ್ಕೆ ನನ್ನ ಅಡಿಯಿಲ್ಲ. ಹೆಸರು ಬದಲಾವಣೆ ಮಾಡೋಣ, ಬಹುಮತ ಅಭಿಪ್ರಾಯದಂತೆ ಹೋಗೋಣ"[೬] ಎನ್ನುವ ಮಾತನ್ನು ಪಕ್ಷದ ಪರವಾಗಿ ಜನತೆ ಮುಂದೆ ತಮ್ಮ ವಿಚಾರ ತಿಳಿಸಿದ್ದೂ ಉಂಟು.

ಮುಂದೆ ೧೯೭೨ರಲ್ಲಿ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡ ದೇವರಾಜ ಅರಸು ಅವರು ಜನತೆಗೆ ಮಾತುಕೊಟ್ಟಂತೆ, ಶಾಸನ ಸಭೆಯಲ್ಲಿ ಕರ್ನಾಟಕದ ನಾಮಕರಣವನ್ನು ಕುರಿತು ಪ್ರಸ್ತಾಪಿಸಿದರು. ಇದರಲ್ಲಿ 'ಕರ್ನಾಟಕ' ಇರಬೇಕೆ ಅಥವಾ 'ಕರ್ಣಾಟಕ' ಇರಬೇಕೆ ಎಂಬುದನ್ನು ಕುರಿತು ಸಾಹಿತಿಗಳಲ್ಲಿ ಜಿಜ್ಞಾಸೆ ಮೂಡಿತು. ಈ ಹೆಸರಿನ ಬಗ್ಗೆ ಅಂದು ಪ್ರಾರಂಭವಾದ ಚರ್ಚೆ ಅರಸು ಕಾಲದಲ್ಲಿಯೂ ಮುಂದುವರಿಯಿತು. ಮುಂದೆ ಕರ್ನಾಟಕ ಬೇಡ 'ಕನ್ನಡ ನಾಡು' ಇರಬಹುದು ಎಂದು ಕೆಲವೆಡೆ ಚರ್ಚೆಯಾಯಿತು. ಈ ಎಲ್ಲಾ ಚರ್ಚೆಯನ್ನು ಗಮನಿಸಿದ ಅರಸು ಇದರಲ್ಲಿ ಯಾವ ಚರ್ಚೆಗೂ ಅವಕಾಶ ಕೊಡದೆ ಬದಲಾವಣೆಯನ್ನು ಮಾಡುವುದು ಎಂದರೆ 'ಕರ್ನಾಟಕ' ಎಂದೇ ಮಾಡಬಹುದು ಎಂದು ಒಂದು ಅಂತಿಮ ನಿರ್ಣಯ ಮಂಡಿಸಿದರು. 'ಕರ್ನಾಟಕ' ಎನ್ನುವ ಹೆಸರನ್ನು ನಮ್ಮ ನಾಡಿನ ಅರಸು ಮನೆತನಗಳು ಈ ಹಿಂದೆ ಉಪಯೋಗಿಸು ತ್ತಿದ್ದರು. 'ಕರ್ನಾಟಕ ಸಿಂಹಾಸನಾಧೀಶ್ವರ' ಎಂದು ಮೈಸೂರು ರಾಜರು ಇಟ್ಟುಕೊಂಡಿದ್ದರು. ಅದರಂತೆ ವಿಜಯನಗರದ ರಾಜರು, ಹೊಯ್ಸಳರು ಹಾಗೂ ಕದಂಬರು ಮೊದಲಾದವರೂ ಕರ್ನಾಟಕ ಸಿಂಹಾಸನಾಧೀಶ್ವರರೇ. ಹೀಗೆ ಒಂದಲ್ಲ ಒಂದು ರೀತಿಯಲ್ಲಿ ಈ ಹೆಸರು ಬಳಕೆಯಲ್ಲಿ ಬರುತ್ತಲೇ ಇತ್ತು. ಸಾಹಿತಿಗಳು 'ಕರ್ನಾಟಕ' ಎಂಬ ಹೆಸರನ್ನು ಇಡಬಹುದೆಂದು ಹೇಳಿದ್ದರು. ಅದರಂತೆ ಅರಸರು ಈ ಸಭೆಯಲ್ಲಿ ತಮ್ಮ ನಿರ್ಣಯ ಮಂಡಿಸಿದರು. ತಮ್ಮ ಸಂಪುಟದಲ್ಲಿನ ಬಹುಜನ ಶಾಸಕರು

ಅಭಿಪ್ರಾಯಪಟ್ಟಂತೆ ಹಾಗೂ ಹೆಚ್ಚು ಜನರು ಅಭಿಪ್ರಾಯ ಪಡುವಂತೆ ನಮ್ಮ ರಾಜ್ಯಕ್ಕೆ ಒಂದು ಶಾಶ್ವತವಾದ ಹೆಸರನ್ನು ಇಟ್ಟು, ಈಗಿರುವ ಹೆಸರನ್ನು ಬದಲಾವಣೆ ಮಾಡಬೇಕೆನ್ನುವ ಒಂದು ತೀರ್ಮಾನಕ್ಕೆ ಬರಲಾಯಿತು. ಆದರೆ ಇದಕ್ಕೆ ದಕ್ಷಿಣಕನ್ನಡ (ಮೈಸೂರು) ಜನತೆಯಿಂದ ಪ್ರಬಲ ಪ್ರತಿರೋಧ ಬಂದಿತು. "ನೀವು ಮೈಸೂರು ಅರಸುಮನೆತನಕ್ಕೆ ಸೇರಿದವರು 'ಮೈಸೂರು' ಅನ್ನುವಂತೆ ಚೆಂದದ ಹೆಸರನ್ನು ಏಕೆ ಬದಲಾಯಿಸುತ್ತೀರಿ ಎನ್ನುವ ಅಭಿಪ್ರಾಯ ಈ ಭಾಗದ ಜನತೆಯದಾಗಿತ್ತು. 'ಮೈಸೂರು' ಎಂದೇ ಇದ್ದರೆ ದಕ್ಷಿಣದವರ ಬೆಲೆಯನ್ನು ಸದಾ ಅದು ಎತ್ತಿತೋರಿಸುತ್ತದೆ. 'ಕರ್ನಾಟಕ' ಅಂತಾದರೆ ಉತ್ತರದವರು ಕೊಚ್ಚಿಕೊಳ್ಳುತ್ತಾರೆ ಎಂದೆಲ್ಲಾ ಒತ್ತಡವು ಬಂದವು. ಅರಸು ಅದಕ್ಕೆ ಸೊಪ್ಪು ಹಾಕಲಿಲ್ಲ. ಕನ್ನಡಿಗರ ಪರಂಪರೆ ಅರಿತ ಯಾರು ಆ ಕೆಲಸ ಮಾಡಲಾರರು. ಕನ್ನಡ ಸಂಸ್ಕೃತಿ ಅನ್ನೋದು ಕಾವೇರಿ, ಗೋದಾವರಿ ನದಿಗಳ ನಡುವೆ ವಿಸ್ತಾರವಾಗಿ ಬಾಳಿ ಬದುಕಿರುವಂಥದ್ದು. ಈ ಬದುಕೆ ಕನ್ನಡ ಸಂಸ್ಕೃತಿ, ಕರ್ನಾಟಕ ಸಂಸ್ಕೃತಿಗೆ 'ಕರ್ನಾಟಕ' ಎಂಬ ಹೆಸರೇ ಭೂಷಣ. ಈ ಬಗೆಗಿನ ಅರಸು ತಮ್ಮ ನಿಲುವು ಸ್ಪಷ್ಟಪಡಿಸಿದರು.

ರಾಜ್ಯದ ಹೆಸರಿನ ಬದಲಾವಣೆಯಿಂದ ನಾಡಿನ ಜನತೆಗೆ ಒಂದು ರೀತಿಯಿಂದ ಆನಂದ, ಹಾಗೂ ಸಂತೋಷ ಉಂಟಾಗುತ್ತದೆ ಎಂದು ಅರಸು ಅವರಿಗೆ ತಿಳಿದಿತ್ತು. ಅನೇಕ ಜನ ಸಾಹಿತಿಗಳು ಕರ್ನಾಟಕದಲ್ಲಿ ಇದ್ದಾರೆ. ಇಂಥ ಸಾಹಿತಿಗಳಲ್ಲಿ ಹಿರಿಯರಿಂದ ಕಿರಿಯರವರೆಗೂ ಅಂದರೆ ಶ್ರೀಮಾನ್ ಬೇಂದ್ರೆಯವರು ಹಾಗೂ ರಾಷ್ಟ್ರಕವಿಗಳಾದ ಕೆ.ವಿ. ಪುಟ್ಟಪ್ಪನವರು ಮತ್ತೆ ಇತರ ಸಾಹಿತಿಗಳು ಈಗಿರುವ ಹೆಸರನ್ನು ಬದಲಾವಣೆ ಮಾಡಿ 'ಕರ್ನಾಟಕ' ಎಂದು ನಾಮಕರಣ ಮಾಡಬೇಕು ಎಂದು ಸತತವಾಗಿ ಹೇಳುತ್ತಾ ಬಂದಿದ್ದಾರೆ. ಮತ್ತು ಈ ಬದಲಾವಣೆಗೆ ಬೆಂಬಲ ಕೂಡ ನೀಡುತ್ತಾ ಬಂದಿದ್ದಾರೆ. ಅಲ್ಲದೆ ಬುದ್ಧಿಜೀವಿಗಳು, ಅನೇಕ ವಿದ್ಯಾರ್ಥಿಗಳು ಹಾಗೂ ಮಧ್ಯಮ ವರ್ಗದ ಜನರೂ, ಈಗಿನ ಯುವಕ ಜನಾಂಗದವರೂ ಬದಲಾವಣೆಗೆ ಒತ್ತಡ ತಂದಿದ್ದಾರೆ. ಅದೇ ರೀತಿ ಆಡಳಿತದ ಕೈಗಾರಿಕಾ ಕ್ಷೇತ್ರದವರ ಅಭಿಪ್ರಾಯವೂ ಕೂಡ ಇದೇ ಆಗಿತ್ತು. ಇದನ್ನು ಮನಗಂಡಿದ್ದ ಅರಸು ಅವರು ಶಾಲಿವಾಹನ ಶಕೆ ೧೯೦೧ನೇ ಸಿದ್ಧಾರ್ಥಿ ಸಂವತ್ಸರದ ಶರದೃತು ಕಾರ್ತಿಕ ಶುಕ್ಲ ದ್ವಾದಶಿ ಗುರವಾರ ಅಪಾರ ಜನತೆಯ ಕರಡತಾನಗಳ ನಡುವೆ ನವೆಂಬರ್ ೧, ೧೯೭೩ರಂದು ಮೈಸೂರು ರಾಜ್ಯವನ್ನು 'ಕರ್ನಾಟಕ' ಎಂದು ನಾಮಕರಣ ಮಾಡಿದರು. ಜೊತೆಗೆ 'ಕರ್ನಾಟಕಕ್ಕೆ ಶುಭವಾಗಲಿ' ಎಂದು ಘೋಷಣೆ ಮಾಡುವುದರೊಂದಿಗೆ 'ಕನ್ನಡ'ವನ್ನು ರಾಜ್ಯದ ಅಧಿಕೃತ ಭಾಷೆಯೆಂದು ಘೋಷಣೆ ಹೊರಡಿಸಿದರು.

ಹೀಗೆ ಕೆಲವು ವರ್ಷಗಳಿಂದ ನೆನೆಗುದಿಗೆ ಬಿದ್ದಿದ್ದ 'ಕರ್ನಾಟಕ'ದ ನಾಮಕರಣವನ್ನು ಅರಸು ತಮ್ಮ ಆಡಳಿತ ಅವಧಿಯಲ್ಲಿ ಕಾರ್ಯಗತಗೊಳಿಸಿದ್ದರು. ಇದು ನಾಡು-ನುಡಿ, ಸಂಸ್ಕೃತಿಯ ಬಗ್ಗೆ ಅವರಿಗಿದ್ದ ಕಳಕಳಿಯನ್ನು ಪ್ರತಿಬಿಂಬಿಸುತ್ತದೆ. ೧೯೫೬ ನವೆಂಬರ್ ೧ ರಂದು ಕನ್ನಡನಾಡು ಒಂದಾಯಿತು. ಆದರೆ ಈ ನಾಡಿನ ಹಿರಿಮೆ, ಸಂಸ್ಕೃತಿ ಮತ್ತು ಒಗ್ಗಟ್ಟಿನ ಸಂಕೇತವಾದ ಹೆಸರು

ಇರದೇ ಇದ್ದದ್ದು ಜನಮನದ ಅಂತರಾಳವನ್ನು ಕಲುಕಿತ್ತು. ಆದರೆ ೧೭ ವರ್ಷಗಳ ನಂತರ ಸಮಸ್ತ ಕನ್ನಡಿಗರ `ಕರ್ನಾಟಕ' ನಾಮಕರಣದ ಕನಸು ನನಸಾಗಿಸಿದ ಕೀರ್ತಿ ಆಗಿನ ಮುಖ್ಯಮಂತ್ರಿಗಳಾಗಿದ್ದ ದೇವರಾಜ ಅರಸು ಅವರಿಗೆ ಸಲ್ಲುತ್ತದೆ.

ದೇವರಾಜ ಅರಸು ಸಾಧನೆಗಳ ಬಗೆಗೆ ಕುವೆಂಪು ಅವರು "ಕನ್ನಡ ನಾಯಕರತ್ನ" ಎಂದು ಕರೆದು ಅವರಿಗೆ ಸರ್ವಯಶಸ್ಸನ್ನು ಕೋರುತ್ತಾ, 'ಅರಸು ಎಲ್ಲ ಕನ್ನಡಿಗರ ಅಭಿಮಾನದ ನಾಯಕರಾಗಿದ್ದಾರೆ. ಸಾಮಾಜಿಕ ಮತ್ತು ಆರ್ಥಿಕದಂಥ ಅನೇಕ ಯೋಜನೆಗಳನ್ನು ಜಾರಿಗೆ ತಂದು ಬಡವರ, ಅಸಹಾಯಕರ ಮುಖದಲ್ಲಿ ಆಶಾಕಿರಣ ಚಿಮ್ಮುವಂತೆ ಮಾಡಿದ್ದಾರೆ. ಅಂತೆಯೇ ಕನ್ನಡ ನಾಡು-ನುಡಿ, ಸಂಸ್ಕೃತಿಯ ಚರಿತ್ರೆಯಲ್ಲೂ ಅವರು ಕನ್ನಡಿಗರ ಪ್ರೀತಿ-ಗೌರವಗಳಿಗೆ ಭಾಜನರಾಗಿದ್ದಾರೆ'[೧೦] ಎಂದು ಕುವೆಂಪು ಅಭಿಪ್ರಾಯಪಟ್ಟಿರುವುದರಲ್ಲಿ ಸತ್ಯಾಂಶ ಅಡಕವಾಗಿದೆ.

ಈ ಹಿನ್ನೆಲೆಯಲ್ಲಿ ಅರಸುರವರು ಕರ್ನಾಟಕದಲ್ಲಿ ಅನನ್ಯ ಕಾರ್ಯಕ್ರಮಗಳಾದ ಆರ್ಥಿಕ, ಸಾಮಾಜಿಕ, ರಾಜಕೀಯ, ವಿಜ್ಞಾನ-ತಂತ್ರಜ್ಞಾನ ಮತ್ತು ಚಲನಚಿತ್ರೋದ್ಯಮ ಇತ್ಯಾದಿಗಳ ರಂಗಗಳಲ್ಲಿ ಕ್ರಾಂತಿಕಾರಕ ಬದಲಾವಣೆಯನ್ನು ತರುವಲ್ಲಿ ಸಮಗ್ರ ಕರ್ನಾಟಕದ ಅಭಿವೃದ್ಧಿಗೆ ಕಾರಣೀಭೂತರಾದರು. ಜೊತೆಗೆ ಸಾಹಿತ್ಯ, ಸಂಸ್ಕೃತಿ, ಕಲೆ, ನಾಡು-ನುಡಿ, ಭಾಷೆಗೆ ಹೆಚ್ಚು ಪ್ರೋತ್ಸಾಹ ನೀಡಿದರು. ಹೀಗಾಗಿ ಕರ್ನಾಟಕದ ಸಂಸ್ಕೃತಿಯನ್ನು ಪ್ರಜ್ವಲಿಸುವಂತೆ ಮಾಡಿದ್ದು ಅರಸು ಸಾಧನೆಗೆ ಸಾಕ್ಷಿಯಾಗಿದೆ. ಇಂತಹ ಒಬ್ಬ ಸಾಂಸ್ಕೃತಿಕ ನಾಯಕನನ್ನು ಸದಾ ಸ್ಮರಿಸುವುದು ಕರ್ತವ್ಯ. ಆದರೆ ಇಂದು ಅವರ ಹೆಸರನ್ನು, ಅವರ ಕಾರ್ಯಗಳ ಸ್ಮರಣೆಯನ್ನು ಹಿನ್ನೆಲೆಗೆ ಸರಿಸುವ ಪ್ರಯತ್ನ ನಡೆದಿದೆ. ಇದು ಅತ್ಯಂತ ದುರಂತದ ಸಂಗತಿಯಾಗಿದೆ.

## ಟಿಪ್ಪಣಿಗಳು

೧. ವೆಂಕಟೇಶ ಎಚ್.ಎ., (ಸಂ.), (೨೦೦೦), **ಕರ್ನಾಟಕದ ಅರಸು**, ಪು.೮೦

೨. ದೇವರಾಜ ಅರಸು ಸಂಶೋಧನಾ ಸಂಸ್ಥೆ., (೧೯೯೭), **ಸಾಧನೆಗಳ ಸರದಾರ**, ಪು.೯೩

೩. ನಾಯಕ ಹಾ.ಮಾ., (ಸಂ.), (೧೯೭೬), **ಪ್ರಗತಿಪಥ ದೇವರಾಜ ಅರಸು ಕರ್ನಾಟಕದ ಮುಖ್ಯಮಂತ್ರಿಗಳು**, ಪು.೧೯೩

೪. ಅದೇ, ಪು.೧೯೬

೫. ಅದೇ, ಪು.೪೧

೬. ಕನ್ನಡ ಸಾಹಿತ್ಯ ಪರಿಷತ್ತು., (೧೯೭೪), **ಕನ್ನಡ ನುಡಿ**, ಜೂನ್ ೧೬; ಪು.೧೪೩

೭. ದೇವರಾಜ ಅರಸು ಸಂಶೋಧನಾ ಸಂಸ್ಥೆ., (೧೯೯೭), ಮೇಲಿನದೆ, ಪು.೬೩

೮. ನಾಯಕ ಹಾ.ಮಾ., (ಸಂ.), (೧೯೭೬), **ಕರ್ನಾಟಕಕ್ಕೆ ಶುಭವಾಗಲಿ**, ಪು.೧೦೮

೯. ಅದೇ, ಪು.೧೦

೧೦. ಕೋಣಂದೂರು ವೆಂಕಪ್ಪಗೌಡ., (ಸಂ.), (೧೯೮೪), **ಪರಿವರ್ತನೆಯ ಹರಿಕಾರ ದೇವರಾಜ ಅರಸು**, ಪು.೩೦೬

ಪ್ರಸ್ತುತ ಅಧ್ಯಯನವು ಡಿ. ದೇವರಾಜ ಅರಸು ಚಿಂತನೆಗಳ ವಿಶ್ಲೇಷಣೆ ಕುರಿತದ್ದಾಗಿದೆ. ಅಂದರೆ ಅರಸು ಅವರ ಜೀವನ, ಪರಿಚಯ-ಪರಿಸರ-ಪ್ರಭಾವ ಹಾಗೂ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಚಿಂತನೆಗಳನ್ನು ಕುರಿತು ವಿಶ್ಲೇಷಿಸುವಂಥದ್ದು. ಮಂಗರಸು ವಂಶಸ್ಥರಾಗಿ ಸಾಮಾನ್ಯ ರೈತ ಕುಟುಂಬದಲ್ಲಿ ಜನಿಸಿದ ಅವರು ಸಮಾಜದಲ್ಲಿ ಕ್ರಾಂತಿಕಾರಕ ಯೋಜನೆಗಳನ್ನು ಕೈಗೊಂಡು ಆ ಮೂಲಕ ಜನರಲ್ಲಿ ಹೊಸತನದ ಅಲೆಯನ್ನಬ್ಬಿಸಿ ಸಮಗ್ರ ಸಮಾಜವನ್ನು ಚಲನಾಶೀಲ ವಾಗಿಸಿದ ರಾಜ್ಯದ ಅಪರೂಪದ ರಾಜಕಾರಣಿ ಡಿ. ದೇವರಾಜ ಅರಸು.

ಸ್ವಾತಂತ್ರ್ಯ ನಂತರದಲ್ಲಿ ಎರಡುವರೆ ದಶಕಗಳ ಕಾಲ ಅಧಿಕಾರ ಪ್ರಾಬಲ್ಯ ಹೊಂದಿದ್ದ ಸಮಾಜದ ಪ್ರಬಲ ಶಕ್ತಿಗಳನ್ನು ಗಣನೀಯವಾಗಿ ನಿಷ್ಕ್ರಿಯಗೊಳಿಸಿದರು. ಅಲ್ಲದೆ ಸಮಾಜದ ಹಿಂದುಳಿದವರಲ್ಲಿ ಜಾಗೃತಿ ಮೂಡಿಸಲು ಹಾಗೂ ಪರ್ಯಾಯ ನಾಯಕತ್ವವನ್ನು ಬೆಳೆಸಲು ತಮ್ಮದೇ ಆದ ರೀತಿಯಲ್ಲಿ ಶ್ರಮಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. 'ಹಳೆಯದನ್ನು ಬದಲಾಯಿಸದೆ ರಾಜಕಾರಣದಲ್ಲಿ ಬದಲಾವಣೆ ತರಲು ಸಾಧ್ಯವಿಲ್ಲ' ಎಂಬ ನಂಬಿಕೆ ಅವರದು. ಚದುರಿಹೋಗಿದ್ದ ಹಿಂದುಳಿದ ವರ್ಗದವರನ್ನು ಒಗ್ಗೂಡಿಸಿ ರಾಜಕಾರಣದಲ್ಲಿ ಪ್ರಬಲ ವರ್ಗದವರಿಗೆ ದೊಡ್ಡ ಸವಾಲು ನೀಡಿ ಹಿಂದುಳಿದ ವರ್ಗಗಳ ಕೈಗೆ ಆಡಳಿತದ ಚುಕ್ಕಾಣಿಯನ್ನು ನೀಡುವ ಮೂಲಕ ಅವರನ್ನು ಸಕ್ರಿಯ ರಾಜಕಾರಣದಲ್ಲಿ ತೊಡಗುವಂತೆ ಮಾಡಿದವರು. ಹಿಂದುಳಿದ ವರ್ಗಗಳ ನಾಯಕರಾದ ಆರ್. ಗುಂಡುರಾವ್, ವೀರಪ್ಪ ಮೊಯ್ಲಿ, ಬಂಗಾರಪ್ಪ, ಮಲ್ಲಿಕಾರ್ಜುನ ಖರ್ಗೆ, ಧರ್ಮಸಿಂಗ್, ಟಿ.ಎನ್. ನರಸಿಂಹಮೂರ್ತಿ, ಎಚ್. ರಂಗನಾಥ, ಬಿ. ಬಸಲಿಂಗಪ್ಪ, ಎಲ್.ಜಿ. ಹಾವನೂರ್‌ನರವರಂಥ ಬಹುಪಾಲು ನಾಯಕರು ರಾಜಕಾರಣದಲ್ಲಿ ಪ್ರಬಲವಾಗಿ ಬೆಳೆಯಲು ಅರಸು ಅವರ ನಾಯಕತ್ವವೇ ಮುಖ್ಯ ಕಾರಣವೆಂದರೆ ತಪ್ಪಾಗಲಾರದು.

೧೯೭೮-೭೯ರ ಉತ್ತರ ಪ್ರದೇಶದ ರಾಯ್‌ಬರೇಲಿಯಲ್ಲಿ ಲೋಕಸಭಾ ಸ್ಥಾನಕ್ಕೆ ಸ್ಪರ್ಧಿಸಿ ಸೋತಿದ್ದ ಇಂದಿರಾಗಾಂಧಿಯವರನ್ನು ಕರ್ನಾಟಕದ ಚಿಕ್ಕಮಗಳೂರು ಲೋಕಸಭಾ ಉಪಚುನಾವಣೆಯಲ್ಲಿ ಆರಿಸಿ ಕಳಿಸಿದ್ದು ಅರಸು ಅವರ ರಾಜಕೀಯ ಮುತ್ಸದ್ಧಿತನಕ್ಕೆ ಒಂದು ನಿದರ್ಶನವಾಗಿದೆ. ಅವರ ವಿಶೇಷತೆಯೆಂದರೆ ಜನಪರ ಕಾರ್ಯಗಳಿಗಾಗಿ ರಾಜಕಾರಣದಲ್ಲಿ ರಾಜಿ ಮಾಡಿಕೊಂಡಿದ್ದರೂ ಸಾಮಾಜಿಕ ಚಿಂತನೆ ಮತ್ತು ಅವನ್ನು ಕಾರ್ಯಗತಗೊಳಿಸುವಲ್ಲಿ ಎಂದೂ ರಾಜಿ ಮಾಡಿಕೊಳ್ಳುತ್ತಿರಲಿಲ್ಲ. ಅದರ ಪ್ರತಿಫಲವಾಗಿಯೇ 'ಉಳುವವನೇ ಹೊಲದೊಡೆಯ' (ಭೂಸುಧಾರಣೆ ಕಾಯ್ದೆ) ಹಾಗೂ ಎಲ್.ಜಿ. ಹಾವನೂರ ಆಯೋಗದಂಥ ಕ್ರಾಂತಿಕಾರಕ ಮೀಸಲಾತಿ ಯೋಜನೆಯನ್ನು ರಾಜ್ಯದಲ್ಲಿ ಕಟ್ಟುನಿಟ್ಟಾಗಿ ಜಾರಿಗೆ ತರಲು ಸಾಧ್ಯವಾಯಿತು ಎಂದೇ ಹೇಳಬೇಕು. ಅಂತೆಯೇ ಭೂಶಾಸನವನ್ನು ಅತ್ಯಂತ

ಪುರೋಗಾಮಿ ಎನ್ನುವ ಹಣೆಪಟ್ಟಿ ಹಚ್ಚಿಕೊಂಡು ಈ ದೇಶದಲ್ಲಿ ಪ್ರಬಲರಾಗಿದ್ದ ಕಮ್ಯುನಿಷ್ಟರಿಗೂ ಕೂಡ ಅದನ್ನು ಜಾರಿಗೆ ತರಲು ಸಾಧ್ಯವಾಗಿರಲಿಲ್ಲ ಎಂಬುದನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತ ಎಂದೆನಿಸುತ್ತದೆ. ಮುಂದೆ ಕೇರಳ ಮತ್ತು ಪಶ್ಚಿಮ ಬಂಗಾಳದಂಥ ರಾಜ್ಯ ಸರ್ಕಾರಗಳು ಈ ಪ್ರಗತಿಪರ ಯೋಜನೆಯನ್ನು ಜಾರಿಗೊಳಿಸಿದ್ದು ಅರಸು ಅವರ ರಾಜಕೀಯ ದೂರದರ್ಶಿತ್ವಕ್ಕೆ ಕೊಟ್ಟ ಮನ್ನಣೆ ಎಂದರೆ ಆಶ್ಚರ್ಯವೇನಲ್ಲ.

ಅಷ್ಟೇ ಅಲ್ಲದೆ ಅರಸು ಅವರು ದೇಶದಲ್ಲಿ ಬಡತನದ ರೇಖೆಗಿಂತ ಕೆಳಗಿದ್ದವರನ್ನು ಮೇಲೆತ್ತಲು ಬಡತನ (ಗರೀಬಿ ಹಟಾವೋ) ನಿರ್ಮೂಲನಾ ಯೋಜನೆಯನ್ನು ಕೈಗೊಂಡರು. ಆ ಮೂಲಕ ಬಡವರಿಗೆ ಹರಿಜನ-ಗಿರಿಜನರಿಗಾಗಿ ಗೃಹ ನಿರ್ಮಾಣ ಯೋಜನೆ, ಸಾಲ ಪರಿಹಾರ, ಉಚಿತ ವಿದ್ಯುತ್, ಪದವೀಧರರಿಗೆ ವೇತನ ಹಾಗೂ ವೃದ್ಧಾಪ್ಯ ವೇತನದಂಥ ಸಮಾಜ ಕಲ್ಯಾಣ ಯೋಜನೆಗಳನ್ನು ಕೈಗೊಂಡು ಅವುಗಳ ಫಲಾನು-ಫಲವನ್ನು ಬಡಜನತೆಗೆ ಮುಟ್ಟಿಸಿದ ಸಾಧನೆ ಅವರದಾಗಿದೆ. ಇವೆಲ್ಲವುಗಳ ಹಿಂದಿನ ಇಂಗಿತ ರಾಜಕೀಯ ಬಲವರ್ಧನೆಯೇ ಆಗಿತ್ತು ಎಂಬುದನ್ನು ಮರೆಯಬಾರದು. ಆದರೂ ಪಟ್ಟಭದ್ರ ಹಿತಾಸಕ್ತಿಗಳ ಹಾಗೂ ಬುದ್ಧಿಜೀವಿಗಳ ಬೆಂಬಲವನ್ನು ಅರಸು ಅವರು ತಮ್ಮ ಮುಖ್ಯಮಂತ್ರಿ ಪದವಿಯಿಂದ ಇಳಿಯುವ ತನಕವೂ ಗಳಿಸಿಕೊಳ್ಳುವ ಪ್ರಯತ್ನ ಮಾಡುವುದಿರಲಿ, ಖಡಾ-ಖಂಡಿತವಾಗಿ ಬೇಡವೇ ಬೇಡ ಎಂದು ತಿರಸ್ಕರಿಸಿದ್ದೂ ಉಂಟು. ಇದರಿಂದ ಅರಸು ಅವರು ಕೇವಲ ತಮ್ಮ ಅದೃಶ್ಯ ಮತದಾರರನ್ನೇ ನಂಬಿಕೊಂಡಿದ್ದರು ಎಂಬುದು ಕಂಡುಬರುತ್ತದೆ. ಅಂತೆಯೇ ಅವರು ಈ ನಂಬಿಕೆಗೆ ಒಂದು ತಾತ್ವಿಕ ತಳಹದಿ ಹಾಕಲು ಸಂಸದೀಯ ಪ್ರಜಾ ವ್ಯವಸ್ಥೆಯಲ್ಲಿ ಸಾಧ್ಯವಿದ್ದ ಪ್ರಾಮಾಣಿಕ ಪ್ರಯತ್ನಗಳೆಲ್ಲವನ್ನು ಮಾಡಿದರು. ಆ ಪ್ರಯತ್ನಗಳ ಫಲದಿಂದಾಗಿಯೇ, ಈ ಉದಾರವಾದಿಯೆನ್ನಬಹುದಾದ ಮೇಲಿನ ಯೋಜನೆಗಳ ಜಾರಿಗೊಳಿಸುವಿಕೆಗೆ ಕಾರಣವಾಗಿದ್ದು.

'ಇಪ್ಪತ್ತು ಅಂಶಗಳ ಕಾರ್ಯಕ್ರಮ'ವು ಅನುಷ್ಠಾನಕ್ಕೆ ಬಂದದ್ದು ಅರಸು ಅವರ ಆಳ್ವಿಕೆ ಅವಧಿಯಲ್ಲಿಯೆ. ಇದು ದೇಶದ ಸರ್ವತೋಮುಖ ಪ್ರಗತಿಯ ದೃಷ್ಟಿಯಿಂದ ಜಾರಿಗೆ ತಂದ ಯೋಜನೆ ಎಂದರೆ ಅತಿಶಯೋಕ್ತಿಯಾಗಲಾರದು. ಆದರೆ ಅದು ಪ್ರಾಮಾಣಿಕವಾಗಿ ಜಾರಿಯಾದದ್ದು ಕರ್ನಾಟಕದಲ್ಲಿ ಮಾತ್ರವೆ. ದೇಶದ ಬೇರೆ ರಾಜ್ಯಗಳಲ್ಲಿ ಯೋಜನೆ ಜಾರಿಗೆ ಬಂದಿತಾದರೂ ಅದು ಕೇವಲ ಹೆಸರಿಗೆ ಮಾತ್ರದ್ದಾಗಿತ್ತು. ದೀನ-ದಲಿತರ ಬಗ್ಗೆ ಅರಸು ಅವರಿಗಿದ್ದ ಅನುಕಂಪದಿಂದಾಗಿಯೇ ನಮ್ಮ ರಾಜ್ಯದಲ್ಲಿ ಆ ಕಾರ್ಯಕ್ರಮಕ್ಕೆ ಹೆಚ್ಚಿನ ಮಾನ್ಯತೆ ದೊರೆಯಿತೆಂದು ಹೇಳಬಹುದು.

ಅಸ್ಪೃಶ್ಯತೆಯು ಹಿಂದೂ ಸಮಾಜದ ವರ್ಣವ್ಯವಸ್ಥೆಯಲ್ಲಿನ ಒಂದು ಅನಿಷ್ಟ ಪದ್ಧತಿಯಾಗಿದೆ. ಒಂದೇ ಸಮಾಜದ ಒಂದು ಜಾತಿಯು ಮತ್ತೊಂದು ಜಾತಿಯ ಮೇಲೆ ನಡೆಸಿಕೊಂಡು ಬಂದ ಕ್ರೂರತನವು ಸಾಮಾಜಿಕ ಅಸಹನೆಯಾಗಿದೆ. ಮನುಷ್ಯ ಮನುಷ್ಯನನ್ನೇ ಹಿಂಸಿಸುವ ಈ ಕ್ರೌರ್ಯಕ್ಕೆ, ಅಸಹನೆಗೆ, ಅಸಹ್ಯ ಪದ್ಧತಿಗೆ ಸಮಾನವಾದದ್ದು ವಿಶ್ವ ಇತಿಹಾಸದಲ್ಲಿ ಇನ್ನೊಂದು ಇಲ್ಲ. ಅಸ್ಪೃಶ್ಯತೆ ಇಂದು ಸಂಪೂರ್ಣ ನಾಶವಾಗದಿದ್ದರೂ, ಇಂಥ ಅನಿಷ್ಟ ಪದ್ಧತಿಯನ್ನು ನಿರ್ಮೂಲನೆ ಮಾಡುವಲ್ಲಿ ದೇವರಾಜ ಅರಸು ಅವರು ಪ್ರಾಮಾಣಿಕ ಪ್ರಯತ್ನ ಮಾಡಿದರು ಎನ್ನುವುದರಲ್ಲಿ ಸಂದೇಹವಿಲ್ಲ.

ಜೊತೆಗೆ ಅವರಿಗೆ ಸಾಮಾಜಿಕ ನ್ಯಾಯವನ್ನು ಒದಗಿಸಿ ಕೊಟ್ಟದ್ದು ಸಣ್ಣ ಸಾಧನೆಯೇನಲ್ಲ. ಜಾತಿಯಲ್ಲಿ ನಂಬಿಕೆಯಿಲ್ಲದ ಅವರು ಜಾತಿಪದ್ಧತಿ, ಜೀತಪದ್ಧತಿ, ಋಣಪರಿಹಾರ, ಮಲಹೊರುವ, ಸಮಾಜದ ಕೀಳಿರಿಮೆಯ ಪದ್ಧತಿಗಳನ್ನು ತೊಡೆದು ಹಾಕಲು ಶ್ರಮಿಸಿದರು. ಇಂಥ ಕಾನೂನು ಬದ್ಧ ಕ್ರಾಂತಿಕಾರಕ ಯೋಜನೆಗಳನ್ನು ಜಾರಿಗೊಳಿಸುವಲ್ಲಿ ಪಟ್ಟಭದ್ರ ಹಿತಾಸಕ್ತಿಗಳನ್ನು ವಿರೋಧ ಕಟ್ಟಿಕೊಳ್ಳುವಲ್ಲಿ ಎಂದೂ ಹಿಂದೇಟು ಹಾಕಿದವರಲ್ಲ. ಇಂಥ ದಿಟ್ಟ ನಿಲುವುಗಳಿಗೆ ಅರಸು ಅವರಲ್ಲಿದ್ದ ದಿಟ್ಟವಾದ ತಾತ್ವಿಕ ನಿಲುವುಗಳೇ ಕಾರಣ.

ಅರಸುರವರು ಕರ್ನಾಟಕ ರಾಜ್ಯವನ್ನು ಆರ್ಥಿಕವಾಗಿ ಬಲಪಡಿಸಲು ಅನನ್ಯ ಯೋಜನೆಗಳನ್ನು ಕೈಗೊಂಡರು. ಅವುಗಳಲ್ಲಿ ಕಿರು ಮತ್ತು ಮಧ್ಯಮ ಗಾತ್ರದ ನೀರಾವರಿ ಯೋಜನೆ, ಜಲಾಭಿವೃದ್ಧಿ ಯೋಜನೆ, ಒಣಭೂಮಿ ಬೇಸಾಯಕ್ಕೆ ಪ್ರೋತ್ಸಾಹ ಹಾಗೂ ಗುಡಿಕೈಗಾರಿಕೆ ಮತ್ತು ಗೃಹಕೈಗಾರಿಕೆಗಳಿಗೆ ಉತ್ತೇಜನ ನೀಡಿದರು. ಕೇವಲ ಕೃಷಿ ಕ್ಷೇತ್ರದಿಂದಲೇ ದೇಶದ ಆರ್ಥಿಕ ಅಭಿವೃದ್ಧಿ ಹೊಂದಲು ಸಾಧ್ಯವಿಲ್ಲ ಎಂಬುದನ್ನು ಮನಗಂಡಿದ್ದ ಅವರು ಹೆಚ್ಚು ಹೆಚ್ಚು ಕೈಗಾರಿಕಾ ಸ್ಥಾಪನೆಗೆ ಅವಕಾಶ ಮಾಡಿಕೊಟ್ಟರು. ಈ ದಿಸೆಯಲ್ಲಿ ಕರ್ನಾಟಕದಲ್ಲಿ ಸ್ಥಾಪಿಸಲ್ಪಟ್ಟ ಕಾರ್ಖಾನೆಗಳು ಅಷ್ಟಿಷ್ಟಲ್ಲ. ಎಚ್.ಎಮ್.ಟಿ., ಎಚ್.ಎ.ಎಲ್. ಮತ್ತು ಐ.ಟಿ.ಐ. ಕಾರ್ಖಾನೆಗಳು ಸ್ಥಾಪನೆಗೊಂಡವು. ಇಷ್ಟಾದರೂ ಕೈಗಾರಿಕೆಯು ಕೃಷಿ ತಳಪಾಯದ ಮೇಲೆ ಬೆಳೆಯ ಬೇಕಾಗಿರುವುದರಿಂದ ಕೈಗಾರಿಕೆಯನ್ನು ದ್ವಿತಿಯ ಕ್ಷೇತ್ರ ಎಂದು ಪರಿಗಣಿಸಿದ್ದು ಉಂಟು. ಆದ್ದರಿಂದ ಆರ್ಥಿಕತೆಯ ಅಸ್ತಿತ್ವದ ದೃಷ್ಟಿಯಿಂದ ಕೈಗಾರಿಕೆಗೆ ಕೃಷಿಯ ನಂತರದ ದ್ವೀತಿಯ ಸ್ಥಾನ ನೀಡಿದರು. ಹೀಗಾಗಿ ಕೃಷಿ ಕ್ಷೇತ್ರಕ್ಕೂ ಮಹತ್ವ ನೀಡಿದ್ದರು. ಅಂತೆಯೇ ಇವರ ಮಾರ್ಗದರ್ಶನದಲ್ಲಿ ಆಧುನಿಕ ಕೃಷಿ ಕ್ರಮ, ಕೇಂದ್ರೀಕೃತ ಕೃಷಿ ಕಾರ್ಯಕ್ರಮ, ಸಣ್ಣ ನೀರಾವರಿ ಯೋಜನೆ, ಬೃಹತ್ ಆಣೆಕಟ್ಟುಗಳ ಯೋಜನೆಗಳಿಗೆ ಉತ್ತೇಜನ ನೀಡಿದರು. ಜೊತೆಗೆ ರೈತರಿಗೆ ರಸಗೊಬ್ಬರ, ಸುಧಾರಿತ ಬೀಜಗಳ ವಿತರಣೆ ಮತ್ತು ಸಣ್ಣ ರೈತರಿಗೆ ಆರ್ಥಿಕ ನೆರವು ಇತ್ಯಾದಿಗಳನ್ನು ಸರ್ಕಾರದ ಮೂಲಕ ಹಂಚುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು.

ರಾಜ್ಯದಲ್ಲಿ ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸಲು, ಉದ್ಯೋಗ ಅವಕಾಶ ಒದಗಿಸಿ ಕೊಡುವ ನಿಟ್ಟಿನಲ್ಲಿ ಗುಡಿಕೈಗಾರಿಕೆಗಳಾದ ಹೈನುಗಾರಿಕೆ, ಮರದ ಕೆಲಸ, ಚರ್ಮ ಹದ ಮಾಡುವುದು, ಬಟ್ಟೆ ನೇಯುವುದು, ರೇಷ್ಮೆ ಉತ್ಪಾದನೆ ಕೆಲಸ ಇತ್ಯಾದಿ ಕರಕುಶಲ ಕೆಲಸಗಳಿಗೂ ಸರ್ಕಾರದಿಂದ ಧನಸಹಾಯ ಒದಗಿಸಿಕೊಟ್ಟರು. ಅಲ್ಲದೆ ಅವರು ಉತ್ಪಾದಿಸಿದಂಥ ವಸ್ತುಗಳಿಗೆ ಮಾರುಕಟ್ಟೆ ಒದಗಿಸಿಕೊಡುವುದರ ಜೊತೆಗೆ ಬೆಂಬಲ ಬೆಲೆ ನಿಗದಿ ಮಾಡಬೇಕು. ಆಗ ಮಾತ್ರ ಸಮಾಜದಲ್ಲಿರುವ ಬಡಜನತೆಗೆ ಉದ್ಯೋಗ ದೊರೆಯುವುದಲ್ಲದೆ ನೆಮ್ಮದಿ ಜೀವನ ನಡೆಸಲು ಸಾಧ್ಯ. ಇಂಥ ಚಿಂತನೆಗಳು ಮಾಡಿ ಅವುಗಳನ್ನು ಅನುಷ್ಠಾನಗೊಳಿಸಿದವರಲ್ಲಿ ಅರಸುರವರೆ ಮೊದಲಿಗರು.

ದೇವರಾಜ ಅರಸು ಅವರು ಕನ್ನಡ ನಾಡು-ನುಡಿ ಹಾಗೂ ಸಂಸ್ಕೃತಿಗಳ ಬಗೆಗೆ ಅಪಾರ ಒಲವುಳ್ಳವರಾಗಿದ್ದರು. ಸಾಹಿತ್ಯವೆಂಬುದು ನಿಂತ ನೀರಲ್ಲ ಅದು ಸದಾ ಹರಿಯುವ ನೀರಿನಂತೆ ಬದಲಾವಣೆ ಹೊಂದುತ್ತಲೇ ಇರಬೇಕು ಎಂಬುದು ಅವರ ನಿಲುವಾಗಿತ್ತು. ಸಾಹಿತಿಗಳು ಮಡಿವಂತಿಕೆ

ಬಿಟ್ಟವರಾಗಿರಬೇಕು. ಜನಸಾಮಾನ್ಯರ ಸುಖದುಃಖಗಳ ಬದುಕನ್ನು ಬಿಂಬಿಸುವ ಕೃತಿಗಳನ್ನು ಹೊರತರಬೇಕು ಎಂದು ಕರೆನೀಡಿದವರು. ಪ್ರಚಾರ ಸಾಹಿತ್ಯಕ್ಕೆ ವಿರೋಧವಾಗಿದ್ದ ಅವರು, ವಿಚಾರ ಸಾಹಿತ್ಯ, ರಾಷ್ಟ್ರದ ಪುನರ್ ನಿರ್ಮಾಣದಲ್ಲಿ ಜನತೆಯನ್ನು ಸನ್ನದ್ಧುಗೊಳಿಸುವ ಸಾಹಿತ್ಯಕ್ಕೆ ಹೆಚ್ಚು ಮಹತ್ವ ನೀಡಿದರು. ಇದು ಅವರ ಸಾಹಿತ್ಯ ಚಿಂತನೆಗೆ ಒಂದು ಸಾಕ್ಷಿಯಾಗಿದೆ. ಜನರು ಆಧುನಿಕತೆಯ ಪರಿಣಾಮದ ಪ್ರಭಾವದಿಂದಾಗಿ ತಮ್ಮ ಬದುಕಿನ ಮೂಲನೆಲೆಯಲ್ಲಿ ಹೊಸ ಮಾರ್ಪಾಡುಗಳನ್ನು ಕಂಡುಕೊಳ್ಳುವತ್ತ, ಸಾಗಿದ್ದರಿಂದ ಜನಪದ ಸಾಹಿತ್ಯದಲ್ಲಿ ಆಸಕ್ತಿ ಕಳೆದುಕೊಂಡಿದ್ದರು. ಇಂಥ ಸಂದರ್ಭದಲ್ಲಿ ಜನಪದ ಸಾಹಿತ್ಯದ ಹೊಸ ಮೌಲ್ಯಿಕ ರೂಪವನ್ನು ಜನರಲ್ಲಿ ಪ್ರತಿಬಿಂಬಿಸಿದ ಕೀರ್ತಿ ಅರಸುರವರಿಗೆ ಸಲ್ಲುತ್ತದೆ. ಹಾಗೆಯೇ "ಕನ್ನಡಿಗರ ಕರ್ನಾಟಕದ ಕ್ರಿಯಾಶೀಲ ಭಾಷೆ ಕನ್ನಡ," ಅಂತೆಯೇ ಕನ್ನಡವನ್ನು ರಾಜ್ಯದ ಎಲ್ಲಾ ಮಟ್ಟದಲ್ಲಿ ಆಡಳಿತ ಭಾಷೆಯಾಗುವಂತೆ ಘೋಷಣೆ ಮಾಡುವುದರ ಮೂಲಕ ಜನರಲ್ಲಿ ಮಾತೃಭಾಷೆಯ ಅರಿವನ್ನು ಮೂಡಿಸಿದರು. ಇದು ಅವರ ಆಡಳಿತ ಹಿರಿಮೆಯ ದ್ಯೋತಕವಾಗಿದೆ. ಕರ್ನಾಟಕ ರಾಜ್ಯವು ಹಲವು ಜನಾಂಗಗಳಿಂದ ಕೂಡಿರುವುದರಿಂದ ಪ್ರತಿಯೊಂದು ಜನಾಂಗ ತನ್ನದೇ ಆದ ಮಾತೃಭಾಷೆಯನ್ನು ಹೊಂದಿದೆ ಎಂಬ ಬಹುಮುಖಿ ತಾತ್ವಿಕ ನಿಲುವುಗಳನ್ನು ಅರಸು ಮನ ಗಂಡಿದ್ದರು. ಅಲ್ಲದೆ ಮಾತೃಭಾಷೆಯ ಜೊತೆಗೆ ಹಿಂದಿ, ಇಂಗ್ಲಿಷ್ ಕಲಿಯುವುದು ಅವಶ್ಯಕ ಎಂಬ ನೀತಿ ಸಾರವನ್ನು ಪ್ರಚುರಪಡಿಸಿದರು. ರಾಜ್ಯದ ಆಡಳಿತ ದೃಷ್ಟಿಯಿಂದಲೂ ಕೂಡ ಈ ಮೂರು ಭಾಷೆಗಳು ಹೆಚ್ಚು ಮಹತ್ವ ಪಡೆದುಕೊಂಡಿವೆ. ಹೀಗಾಗಿ ಭಾಷಾ ಸೌಹಾರ್ದತೆಯನ್ನು ಮೂಡಿಸುವಲ್ಲಿ ಅವರು ಮಹತ್ವದ ಪಾತ್ರವಹಿಸಿದರು. ಅರಸು ಅವರ ರಾಜಕಾರಣದ ಅವಧಿಯಲ್ಲಿ ನಾಡಿಗೆ 'ಕರ್ನಾಟಕ' ಎಂದು ನಾಮಕರಣ ಮಾಡಿದ್ದು ಐತಿಹಾಸಿಕ ಸಾಧನೆಯಾಗಿದೆ. ಕನ್ನಡ ನಾಡು-ನುಡಿ ಬಗ್ಗೆ ಅಪಾರ ಪ್ರೀತಿ ಹೊಂದಿದ್ದವರಾಗಿದ್ದರು.

ಕರ್ನಾಟಕದಲ್ಲಿ ಕಾಂಗ್ರೆಸ್ ಬಹುಮತದಲ್ಲಿದ್ದರೂ ಜಾತಿಯ ಭೇದಭಾವದಿಂದ ಅನೇಕ ಭಿನ್ನಾಭಿಪ್ರಾಯಗಳ ಒತ್ತಾಯಕ್ಕೆ ಮಣಿದು ಈ ಹಿಂದಿನ ಮುಖ್ಯಮಂತ್ರಿಗಳಾದ ಎಸ್. ನಿಜಲಿಂಗಪ್ಪ, ಬಿ.ಡಿ. ಜತ್ತಿ, ಎಸ್.ಆರ್. ಕಂಠಿ, ವೀರೇಂದ್ರಪಾಟೀಲರಂಥ ಪ್ರಬಲ ನಾಯಕರು ವಿಫಲವಾಗಿದ್ದರು. ಆದರೆ ನಾಡಿಗೆ 'ಕರ್ನಾಟಕ' ಎಂದು ನಾಮಕರಣ ಮಾಡಿ, ಅತ್ಯಂತ ಜಟಿಲವಾಗಿದ್ದ ಈ ಭಾವನಾತ್ಮಕ ಸಮಸ್ಯೆಯನ್ನು ಪರಿಹರಿಸಿದ್ದು ಅರಸುರವರ ಸಣ್ಣ ಸಾಧನೆಯೆನಲ್ಲ. ಇದರಿಂದ ಸುಮಾರು ೧೯೫೬-೧೯೭೩ ನವೆಂಬರ್ ೧, ಅಂದರೆ ೧೭ ವರ್ಷಗಳ ಕಾಲ ನೆನೆಗುದಿಗೆ ಬಿದ್ದಿದ್ದ ನಾಡಿನ ನಾಮಕರಣದ ಕಾರ್ಯವನ್ನು ಪೂರ್ಣಗೊಳಿಸಿದ್ದು ಸಣ್ಣ ಸಾಧನೆಯಲ್ಲ. ಒಂದು ಕಾಲದಲ್ಲಿ ನಾಡಿನ ನಾಮಕರಣವನ್ನು ವಿರೋಧಿಸಿದ್ದ ಅರಸುರವರು ಆಡಳಿತ ದೃಷ್ಟಿಯಿಂದ, ಶಾಸ್ತ್ರೀಯ ದೃಷ್ಟಿಯ ರಾಜ್ಯ ಎರಡಾಗಬೇಕು ಎಂಬ ನಿಲುವೂ ಕೂಡ ಅವರದಾಗಿತ್ತು. ಆದರೆ ಭಾವೈಕ್ಯತೆಯ ದೃಷ್ಟಿಯಿಂದ, ಸಂಸ್ಕೃತಿಯ ದೃಷ್ಟಿಯಿಂದ ರಾಜ್ಯ ಎರಡಾಗತಕ್ಕದಲ್ಲ ಎನ್ನುವ ಅಭಿಪ್ರಾಯಕ್ಕೂ ಕೂಡ ತಲೆಬಾಗಿದ್ದೂ ಉಂಟು. ಹೀಗಾಗಿ ನಾಡು ೧೯೭೩, ನವೆಂಬರ್ ೧ ರಂದು ಮೈಸೂರು ರಾಜ್ಯಕ್ಕೆ 'ಕರ್ನಾಟಕ' ಎಂದು ನಾಮಕರಣ ಮಾಡಿದರು. ಜೊತೆಗೆ ಕನ್ನಡವನ್ನು ರಾಜ್ಯದ ಅಧಿಕೃತ ಭಾಷೆಯನ್ನಾಗಿಸಲು ತೀರ್ಮಾನಿಸಿದರು. ಇಡೀ ಸಮಾಜದ ಸ್ವತ್ತಾಗಬೇಕಾಗಿದ್ದ ವಿದ್ಯೆ, ಜಾತಿ ಕೋಮುಗಳ ಕೈಗೆ ಸಿಕ್ಕಾಯಿತು. ಜಾತ್ಯಾತೀತರನ್ನಾಗಿ

ಪ್ರತಿಭೆಗಳನ್ನು ರೂಪಿಸಬೇಕಾಗಿದ್ದ ಶಿಕ್ಷಣ ಕ್ಷೇತ್ರವನ್ನು ಜಾತಿಶಕ್ತಿಗಳಿಗೆ ದತ್ತು ಬಿಟ್ಟುಕೊಟ್ಟದ್ದು ದೇಶದ ದೌರ್ಭಾಗ್ಯದ ಸಂಗತಿಯೇ ಸರಿ. ಈ ಸ್ಥಿತಿಯನ್ನು ಅರಸುರವರು ಚೆನ್ನಾಗಿ ಅರಿತವರಾಗಿದ್ದರು. ವಿಚಾರವಂತರ, ರಾಷ್ಟ್ರೀಯ ಮನೋಭಾವದ ಜನರ ಕೂಗು ಅವರ ಕಿವಿಯನ್ನು ಮುಟ್ಟಿತು. ಆದ್ದರಿಂದಲೆ ರಾಜ್ಯದಲ್ಲಿ ಶಿಕ್ಷಣವನ್ನು ರಾಷ್ಟ್ರೀಕರಿಸಲು ಅರಸು ಅವರು ಚಿಂತನೆ ನಡೆಸಿದ್ದು. ಇದರ ಪರಿಣಾಮದಿಂದಲೇ ಹಿಂದುಳಿದ ವರ್ಗದವರಿಗೆ, ಅಲ್ಪಸಂಖ್ಯಾತರಿಗೆ ಶೈಕ್ಷಣಿಕ ಸೌಲಭ್ಯಗಳು ದೊರೆಯುವಂಥಾಗಿದ್ದು.

ಕೇವಲ ಸೈದ್ಧಾಂತಿಕ ನಿಲುವುಗಳಷ್ಟೇ ಅರಸರ ವೈಶಿಷ್ಟ್ಯವಲ್ಲ. ಆದರೆ ಅದನ್ನು ವಿರೋಧಿಸುವ ಪಟ್ಟಭದ್ರರನ್ನು ಪ್ರತ್ಯೇಕಿಸಿ ಅವರ ಆಟ ನಡೆಯದಂತೆ ಮಾಡಿ, ತಾನು ನಂಬಿದ ನಿಲುವುಗಳನ್ನು ಜಾರಿಗೆ ತಂದಿದ್ದು ಅವರ ವಿಶೇಷತೆ. ಏಕೆಂದರೆ ಇಂತಹ ಕನಸು ಕಂಡ ಇತರ ರಾಜ್ಯಗಳ ನಾಯಕರು ಉತ್ತಮ ಜಾತಿಯವರ ಪಿತೂರಿಯಿಂದಾಗಿ ಮಣ್ಣುಮುಕ್ಕಿರುವುದು ಕಾಣಬಹುದು. ಒಟ್ಟಿನಲ್ಲಿ ಅರಸು ಅವರು ಕರ್ನಾಟಕದ ಜನಸಮುದಾಯ, ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಬಗೆಗೆ ಅಪಾರ ಕಾಳಜಿ ಹೊಂದಿದ್ದರು. ಇದರಿಂದಾಗಿ ನಾಡು ಎಲ್ಲೆಡೆ ತನ್ನದೇ ಆದ ಸಾಂಸ್ಕೃತಿಕ ಪ್ರಭಾವವನ್ನು ಬೀರುವಂತಾಯಿತು.

## ಆಕರ ಸಾಮಗ್ರಿಗಳು

I. ಪ್ರಾಥಮಿಕ ಆಕರಗಳು

II. ಇತರೆ ಆಕರಗಳು

III. ಆಯ್ದ ಪರಾಮರ್ಶನ ಗ್ರಂಥಗಳು

IV. ಆಯ್ದ ನಿಯತಕಾಲಿಕೆಗಳು

# ಆಕರ ಸಾಮಗ್ರಿಗಳು


## I. ಪ್ರಾಥಮಿಕ ಆಕರಗಳು

**ಕರ್ನಾಟಕ ರಾಜ್ಯ ಪತ್ರಗಾರ ಇಲಾಖೆ, ವಿಧಾನಸೌಧ, ಬೆಂಗಳೂರು**

೧. Extract from the prest Statement made by D. Devaraj Urs, In the Legislative Assembly, 18 August 1972 [5408]B

೨. Statement of the Chief Minister in the Legislative Assembly, August 5, 1972 [5409]B

## II. ಇತರೆ ಆಕರಗಳು

**ಡಿ. ದೇವರಾಜ ಅರಸು ಸಂಶೋಧನಾ ಕೇಂದ್ರ, ಬೆಂಗಳೂರು**

೧. ದೇವರಾಜ ಅರಸು ಸಂಶೋಧನಾ ಸಂಸ್ಥೆ., (೧೯೯೭), **ಸಾಧನೆಗಳ ಸರದಾರ ದೇವರಾಜ ಅರಸು**, ಬೆಂಗಳೂರು

೨. ಚಂದ್ರಮಾ ಕಣಗಲಿ., (೨೦೦೩), **ಡಿ. ದೇವರಾಜ ಅರಸು ಚಿಂತನೆ-ಸಾಧನೆ**, ಬೆಂಗಳೂರು; ದೇವರಾಜ ಅರಸು ಸಂಶೋಧನಾ ಸಂಸ್ಥೆ

## III. ಆಯ್ದ ಪರಾಮರ್ಶನ ಗ್ರಂಥಗಳು

೧. ಅರಳುಮಲ್ಲಿಗೆ ಪಾರ್ಥಸಾರಥಿ., (೨೦೦೧), **ಕರ್ನಾಟಕದ ಮುಖ್ಯಮಂತ್ರಿಗಳು**, ಬೆಂಗಳೂರು; ಸಾಧನ ಪ್ರಕಾಶನ

೨. ಆರಾಧ್ಯ ಬಿ.ಎಂ., (೧೯೮೫), **ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ**, ಬೆಂಗಳೂರು; ಕರ್ನಾಟಕ ಸರ್ಕಾರದ ಕೊಡುಗೆ

೩. ಕೋಣಂದೂರು ವೆಂಕಪ್ಪಗೌಡ (ಸಂ.), (೧೯೮೪), **ಪರಿವರ್ತನೆಯ ಹರಿಕಾರ : ಡಿ. ದೇವರಾಜ ಅರಸು**, ಬೆಂಗಳೂರು; ಯಶಸ್ವಿ ಪ್ರಕಾಶನ

೪. ಗೋವಿಂದರಾಜು ಸಿ.ಆರ್., (೧೯೯೫), **ಕನ್ನಡ-ಕರ್ನಾಟಕತ್ವ**, ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ

೫. ಗೋವಿಂದರಾಜು ಸಿ.ಆರ್., (೧೯೯೫), **ಕರ್ನಾಟಕದ ಏಕೀಕರಣ ಮತ್ತು ಕನ್ನಡ ಸಾಹಿತ್ಯ ಪರಿಷತ್ತು**, ಬೆಂಗಳೂರು; ಕನ್ನಡ ಸಾಹಿತ್ಯ ಪರಿಷತ್ತು

೬. ಗೋಪಾಲಕೃಷ್ಣಯ್ಯ ಕೆ.ಎಲ್., (೧೯೮೨), **ಸಮಾಜವಾದದ ಪರಿಚಯ**, ಬೆಂಗಳೂರು; ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ

೭. ಚಂದ್ರಶೇಖರ್ ಎಸ್., (೧೯೮೩), **ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ಕೆಲವು ಒಳನೋಟಗಳು**, ಬೆಂಗಳೂರು; ಅಂಕಣ ಪ್ರಕಾಶನ

೮. ಚಂದ್ರಶೇಖರ್ ಎಸ್., (೨೦೦೨), **ಆಧುನಿಕ ಕರ್ನಾಟಕದ ಆಂದೋಲನಗಳು**, ತಿಪಟೂರು; ನಮ್ಮ ಪ್ರಕಾಶ

೯. ಚಂದ್ರಶೇಖರ್ ಎಸ್., (೧೯೯೯), **ಸಾಹಿತ್ಯ ಮತ್ತು ಚರಿತ್ರೆ**, ಬೆಂಗಳೂರು; ಅಂಕಿತ ಪ್ರಿಂಟರ್ಸ್

೧೦. ಚಂದ್ರಶೇಖರ್ ಬಿ. ದಾಮ್ಲೆ., (೧೯೯೨), **ಭಾರತೀಯ ಸಾಮಾಜಿಕ ಅಧ್ಯಯನ**, ಬೆಂಗಳೂರು; ನವೀನ ಪ್ರಕಾಶನ

೧೧. ಚಿದಾನಂದಮೂರ್ತಿ ಎಂ., (೧೯೭೦), **ಸಂಶೋಧನಾ ತರಂಗ ಸಂ.೨**, ಬೆಂಗಳೂರು; ಬೆಂಗಳೂರು ವಿಶ್ವವಿದ್ಯಾಲಯ

೧೨. ಜಾಗೀರ್‌ದಾರ್ ಐ.ಕೆ., (೧೯೭೯), **ಅರಸು ಆಡಳಿತ ರಂಗ**, ಬೆಂಗಳೂರು; ಚಾಣಕ್ಯ ಪ್ರಕಾಶನ

೧೩. ದಿವಾಕರ್ ರಂ.ರಾ., (೧೯೯೨), **ಕರ್ನಾಟಕ ಏಕೀಕರಣದ ಕಥೆ**, ಹುಬ್ಬಳ್ಳಿ; ಲೋಕಶಿಕ್ಷಣ ಟ್ರಸ್ಟ್

೧೪. ನಾಯಕ ಹಾ.ಮ., (ಸಂ.), (೧೯೭೬), **ಕರ್ನಾಟಕಕ್ಕೆ ಶುಭವಾಗಲಿ**, ಮೈಸೂರು; ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ

೧೫. ನಾಯಕ ಹಾ.ಮ., (ಸಂ.), (೧೯೭೬), **ಪ್ರಗತಿಪಥ**, ಮೈಸೂರು; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ

೧೬. ನಾಯಕ ಹಾ.ಮ., (ಸಂ.), (೧೯೭೭), **ಕನ್ನಡ ವಿಶ್ವಕೋಶ ಸಂಪುಟ ೯**, ಮೈಸೂರು; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ

೧೭. ನಾಯಕ ಡಿ.ಕೆ., (೨೦೦೦), **ನಾ ಕಂಡ ದೇವರಾಜ ಅರಸು**, ಧಾರವಾಡ; ಮಹಾಮನೆ ಪ್ರಕಾಶನ

೧೮. ನಾಗಯ್ಯ ಹಿ.ಮ., (ಸಂ.), (೧೯೭೪ ಜೂನ್ ೧೬), **ಕನ್ನಡ ನುಡಿ**, ಬೆಂಗಳೂರು; ಕನ್ನಡ ಸಾಹಿತ್ಯ ಪರಿಷತ್ತಿನ ಪತ್ರಿಕೆ

೧೯. ನಾಗರಾಜ ಟಿ., (೧೯೯೯), **ಸಾಮಾಜಿಕ ಚಳುವಳಿಗಳು**, ಮೈಸೂರು; ಚೇತನ್ ಬುಕ್‌ಹೌಸ್

೨೦. ಪಾಟೀಲ್ ಕೆ.ಎಫ್., (೧೯೮೬), **ಕರ್ನಾಟಕ ಏಕೀಕರಣದ ಹಾದಿಯಲ್ಲಿ**, ಹುಬ್ಬಳ್ಳಿ; ವಿವೇಕ ಪ್ರಕಾಶನ

೨೧. ಬೋರಲಿಂಗಯ್ಯ ಹಿ.ಚಿ., (ಸಂ.), (೨೦೦೨), **ಕಾಗೋಡು ಚಳುವಳಿ ಸುವರ್ಣ ಸಂಪುಟ**, ಶಿವಮೊಗ್ಗ; ಮಲೆನಾಡು ಜಾನಪದ ಲೋಕ

೨೨. ಮಧುಕೇಶ., (೨೦೦೨), **ಡಿ. ದೇವರಾಜ ಅರಸು ಜೀವನ ಚರಿತ್ರೆ**, ದಾವಣಗೆರೆ; ನಾಗಾರ್ಜುನ ಎಂಟರ್ ಪ್ರೈಸೆಸ್

೨೩. ಮಧುಕೇಶ., (೨೦೦೨), **ಭೂಸುಧಾರಣೆಯ ಪಿತಾಮಹ : ಅರಸು**, ದಾವಣಗೆರೆ; ನಾಗಾರ್ಜುನ ಎಂಟರ್ ಪ್ರೈಸೆಸ್

೨೪. ಮಧುಕೇಶ., (೨೦೦೨), **ಧೀಮಂತ ನಾಯಕ: ಅರಸು**, ದಾವಣಗೆರೆ; ನಾಗಾರ್ಜುನ ಎಂಟರ್ ಪ್ರೈಸೆಸ್

೨೫. ಯಲ್ಲಪ್ಪರೆಡ್ಡಿ ಆ.ನ., (೨೦೦೧), **ಅರಸು ಯುಗದ ಅರಣ್ಯಪರ್ವ**, ಬೆಂಗಳೂರು; ಅಭಿಮಾನಿ ಪ್ರಕಾಶನ

೨೬. ರಮೇಶ ಬೆ.ಗೋ., (೧೯೯೯), **ಕರ್ನಾಟಕದ ಮುಖ್ಯಮಂತ್ರಿಗಳು**, ಬೆಂಗಳೂರು; ದಿವ್ಯಚಂದ್ರ ಪ್ರಕಾಶನ

೨೭. ರಾಜನ್ ಎ.ಎಸ್., (೧೯೯೮), **ಕರ್ನಾಟಕದಲ್ಲಿ ಭೂಸುಧಾರಣೆ**, ಬೆಂಗಳೂರು; ಐ.ಬಿ.ಎಚ್. ಪ್ರಕಾಶನ

೨೮. ರಾಮಪ್ರಸಾದ್ ಎನ್.ಎಸ್., (೧೯೮೩), **ಡಿ. ದೇವರಾಜ ಅರಸು**, ಬೆಂಗಳೂರು; ಐ.ಬಿ.ಎಚ್. ಪ್ರಕಾಶನ

೨೯. ಲಂಕೇಶ ಪಿ., (೧೯೯೮), **ಟೀಕೆ-ಟಿಪ್ಪಣೆ ಸಂ.೨**, (ನಟರಾಜ ಹುಳಿಯಾರ್ ಆಯ್ಕೆ ಸಂಯೋಜನೆ) ಬೆಂಗಳೂರು; ಪತ್ರಿಕೆ ಪ್ರಕಾಶನ

೩೦. ವಡ್ಡರ್ಸೆ ರಘುರಾಮ್‌ಶೆಟ್ಟಿ., (೨೦೦೨), **ಬಹುರೂಪಿ ಅರಸು**, ಬೆಂಗಳೂರು; ರವಿ ಗ್ರಾಫಿಕ್ಸ್

೩೧. ವಿಜಯ್ ಟಿ.ಪಿ., (ಸಂ.), (೨೦೦೧), **ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೪ ಚರಿತ್ರೆ**, ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ

೩೨. ವೆಂಕಟೇಶ ಎಚ್.ಎ., (ಸಂ.), (೨೦೦೦), **ಕರ್ನಾಟಕದ ಅರಸು**, ಮಂಡ್ಯ; ರಚನಾ ಪ್ರಕಾಶನ

೩೩. ವೈಕುಂಠರಾಜು ಬಿ.ವಿ., (೧೯೪೭), **ಸಂಪಾದಕರ ಡೈರಿ ಸಂ.೨**, ಬೆಂಗಳೂರು; ಸನತ್ ಪ್ರಕಾಶನ

೩೪. ಶಿವರಾಮಯ್ಯ., (ಸಂ.), (೧೯೯೩), **ಸಾಹಿತ್ಯ ಮತ್ತು ಚರಿತ್ರೆ**, ಬೆಂಗಳೂರು; ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್

೩೫. ಸದಾನಂದ ಜೆ.ಎಸ್., (೧೯೯೪), **ಹಿಂದುಳಿದ ವರ್ಗಗಳ ಸಂಘಟನೆ ಮತ್ತು ಹಾವನೂರು ವರದಿ** (ಅರಿವು ಬರಹ), ಬೆಂಗಳೂರು; ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ

೩೬. ಸದಾನಂದ ಜೆ.ಎಸ್., (೨೦೦೦), **ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ** (ಡಿ. ದೇವರಾಜ ಅರಸು), ಬೆಂಗಳೂರು; ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ, ಕರ್ನಾಟಕ ವಿಧಾನಸಭೆ ಸಚಿವಾಲಯ

೩೭. ಸೂರ್ಯನಾಥ ಯು. ಕಾಮತ್., (ಸಂ.), (೧೯೮೬), **ಕರ್ನಾಟಕ ಗ್ಯಾಸೆಟಿಯರ್ ಭಾಗ ೩**, ಬೆಂಗಳೂರು; ಕರ್ನಾಟಕ ರಾಜ್ಯ ಸರ್ಕಾರ

೩೮. ಕ್ಷೀರಸಾಗರ., (೧೯೮೫), **ದಿಕ್ಕುತಪ್ಪಿದ ಕರ್ನಾಟಕದ ಭೂಸುಧಾರಣೆ**, ಬೆಂಗಳೂರು; ಸಿಯಡ್ಸ್ ಚಾರ್ಲ್ಸ್ ಕ್ಯಾಂಬೆಲ್ ಕಾಕ್ಸ್‌ಟೌನ್

## IV. ಆಯ್ದ ನಿಯತಕಾಲಿಕೆಗಳು

೧. ಅರಿವು ಬರಹ

೨. ಅಂಕಣ

೩. ಇತಿಹಾಸ ದರ್ಶನ

೪. ಋಜುವಾತು

೫. ಕನ್ನಡ ಪ್ರಭ

೬. ಕನ್ನಡ ನುಡಿ

೭. ಕೋಲಾರ ಶಕ್ತಿ

೮. ಜನಹಿತ ಬಹುಮತ

೯. ಪ್ರಜಾವಾಣಿ

೧೦. ಪ್ರಬುದ್ಧ ಕರ್ನಾಟಕ

೧೧. ಲಂಕೇಶ್ ಪತ್ರಿಕೆ

೧೨. ವಿಜಯ ಕರ್ನಾಟಕ

೧೩. ಶೂದ್ರ

೧೪. ಸಂಯುಕ್ತ ಕರ್ನಾಟಕ

೧೫. ಸಂಕ್ರಮಣ

೧೬. ಸಾಧನೆ

೧೭. ಸುಧಾ

೧೮. ಹೊಸತು

**- ಇತ್ಯಾದಿ**



ಡಿ. ದೇವರಾಜ ಅರಸು



ಮುಖ್ಯಮಂತ್ರಿಯಾಗಿ ಪ್ರಮಾಣ ವಚನ



ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿ ಅವರೊಂದಿಗೆ



'ಕರ್ನಾಟಕ' ನಾಮಕರಣದ ಸಂದರ್ಭ

